ಮಿಂಚಿನಬಳ್ಳಿಯ ಎರಡನೆಯ ವರುಷದ ಮೂರನೆಯ ಕುಡಿ

# ಮುಂದುವರಿದ ಜಪಾನು

•

ಬರೆದವರು :

ಕೆ. ಎಲ್. ನಂಜಪ್ಪ,

ವಾಣಿಜ್ಯ ವಿಶ್ವವಿದ್ಯಾನಿಲಯ, ಟೋಕಿಯೊ

•

ಚಾಲುಕ್ಯ ವಿಕ್ರಮ ವಿರುಷ ೮೬೪

ಭಾದ್ರಪದ ತೃತಿಯಾ

೧೯೩೯

•

ಸಾದಾ ಪ್ರತಿ ೧ ರೂ — ಕ್ಯಾಲಿಕೊ ಪ್ರತಿ ೧ ರೂ. ೮ ಆ.

ಮುದ್ರಕರು :
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ



ಎರಡನೆಯ ವರುಷದ ನಾಲ್ಕನೆಯ ಕುಡಿಯು

# ಕನ್ನಡ ಸಾಹಿತ್ಯ ಚರಿತ್ರೆ

ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ.

ಡಿಶಂಬರ ತಿಂಗಳಲ್ಲಿ ಪ್ರಕಟವಾಗುವದು.

ಪ್ರಕಾಶಕರು :
ಬಾಳಾಚಾರ್ಯ ಗುರಾಚಾರ್ಯ ಅವಧಾನಿ
ಮಿಂಚಿನಬಳ್ಳಿಯ ಚಾವಡಿ
ದೇಸಾಯಿ ಬೀದಿ
ಧಾರವಾಡ

# ಪ ರಿ ವಿ ಡಿ



## ನಾಲ್ಕನೆಯ ಪ್ರಕರಣ:



## ಐದನೆಯ ಪ್ರಕರಣ:



## ಆರನೆಯ ಪ್ರಕರಣ:



—



ರಾಜಬೀದಿಯಲ್ಲಿ
ವಿದ್ಯಾರ್ಥಿಗಳ
ಮೆರವಣಿಗೆ





ಶಾಲೆಯಲ್ಲಿಯ
ವಿದ್ಯಾರ್ಥಿಗಳ
ಉಪಹಾರಗೃಹ



ನಿಕ್ಕೊ ಜಲಪಾತ





ನಿಕ್ಕೊ ಜಲಪಾತಕ್ಕೆ ಹೋಗುವ
ಸುರಂಗ ಮಾರ್ಗ

# ಮುಂದುವರಿದ ಜಪಾನು

## ( ಎರಡನೆಯ ಭಾಗ )



## ನಾಲ್ಕನೆಯ ಪ್ರಕರಣ

## ಜಪಾನದ ಪರದೇಶ ವ್ಯಾಪಾರದ ಪ್ರಗತಿ



ಜಪಾನದ ಏಳಿಗೆಯ ಈ ೭೦ ವರುಷಗಳಲ್ಲಿ ಪರದೇಶದ ವ್ಯಾಪಾರವು ಕೂಡ ನೂರಕ್ಕೆ ೩೫೦ ರಷ್ಟು ಹೆಚ್ಚಾಗಿರುವದು. ೧೮೬೮ ರಲ್ಲಿ ಜಪಾನಿನ ನಿರ್ಯಾತ ಪದಾರ್ಥಗಳ ಒಟ್ಟು ಬೆಲೆಯು ಎರಡುಕೋಟಿ ಅರವತ್ತು ಲಕ್ಷ ಎನ್ನು ಮಾತ್ರ ಇದ್ದಿತು; ಆದರೆ ೧೯೩೬ ರ ಕೊನೆಗೆ ಎಂಟು ಕೋಟಿ ಮೂವತ್ತು ಲಕ್ಷ ಎನ್ನುಗಳಾಯಿತು. ಜಪಾನದ ಪರದೇಶದ ವ್ಯಾಪಾರವು ಇಂಥ ವಿಶ್ವರೂಪವನ್ನು ತಾಳಲು ಮಹಾಯುದ್ಧವೇ ಮುಖ್ಯಕಾರಣವೆನ್ನಬಹುದು. ಯುರೋಪವು ಯುದ್ಧದಲ್ಲಿ ತೊಡಗಿದಾಗ ಜಪಾನವು ಕೈಗಾರಿಕೆಗಳ ಪ್ರಗತಿಯನ್ನು ವಿಪರೀತವಾಗಿ ಬೆಳೆಯಿಸಿದ್ದರಿಂದ ಆಯಾತ-ನಿರ್ಯಾತವೂ ಸಹಜವಾಗಿ ಆ ಪ್ರಮಾಣದಿಂದಲೇ ಹೆಚ್ಚಾಯಿತು. ೧೯೧೪ ರಲ್ಲಿದ್ದ ಆಯಾತದ ಬೆಲೆಯು ೧೯೨೦ ರ ಹೊತ್ತಿಗೆ ನಾಲ್ಕು ಪಟ್ಟು, ನಿರ್ಯಾತದ ಬೆಲೆಯು ಮೂರುಪಟ್ಟು ಬೆಳೆದವು. ವ್ಯಾಪಾರವು ಅವ್ಯಾಹತವಾಗಿ ಸಾಗುತ್ತಲೇ ಇದ್ದಿತ್ತು. ಆದರೆ ೧೯೩೧ ರಲ್ಲಿ ಬ್ರಿಟನ್ನವು ಚಿನ್ನದ ನಾಣ್ಯಗಳ ಬೆಲೆಯನ್ನು ಹೆಚ್ಚಿಸಿದ್ದರಿಂದ ಧಾರಣೆಗಳು ತಗ್ಗಿ ವಾಪಾರವು ಕುಗ್ಗಿತು.

ಆದ್ದರಿಂದ ಜಪಾನವೂ ಕೂಡ ತನ್ನ ಚಿನ್ನದ ನಾಣ್ಯಗಳ ಬೆಲೆಯನ್ನೇರಿಸಿ ನಿರ್ಯಾತದ ವ್ಯಾಪಾರಕ್ಕೆ ಪ್ರೋತ್ಸಾಹವನ್ನಿತ್ತಿತು. ಇಂದಿನ ಆಯಾತದ ಬೆಲೆಯು ೧೯೩೦ ರಲ್ಲಿದ್ದುದರಗಿಂತ ಕಡಿಮೆಯಾಗಿದೆ. ನಿರ್ಯಾತದ ಬೆಲೆಯು ಮಾತ್ರ ಹಿಂದಿನಗಿಂತ ೧೦೦ ಕ್ಕೆ ೧.೧ ರಷ್ಟು ಹೆಚ್ಚಾಗಿರುವದು. ಇಂದು ಜಪಾನದ ವ್ಯಾಪಾರವು ಭವ್ಯವಾಗಿ ಕಂಡರೂ ೧೫ ವರುಷಗಳ ಹಿಂದೆ ಇದ್ದಷ್ಟು ಮಾತ್ರ ಈಗ ಇರುತ್ತದೆ. ಈ ಅವಧಿಯಲ್ಲಿ ೧೦೦ ಕ್ಕೆ ೩೦ ರಂತೆ ಬೆಳೆದ ಜನಸಂಖ್ಯೆಯನ್ನೂ ಗಣನೆಗೆ ತರಬೇಕಾಗುತ್ತದೆ. ಅನೇಕ ಪರದೇಶಿಯರು, ಜಪಾನ ಪದಾರ್ಥಗಳು ಎಲ್ಲ ದೇಶಗಳಲ್ಲಿ ಧುಮುಕುತ್ತಿರುವದನ್ನು ನೋಡಿ ಗಾಬರಿಯಾಗಿದ್ದಾರೆ. ಆದರೆ ಜಪಾನದಲ್ಲಿ ಧುಮುಕುತ್ತಿರುವ ಪರದೇಶದ ಪದಾರ್ಥಗಳ ಬೆಲೆಯೊಡನೆ ಹೋಲಿಸಿ ನೋಡಿದ್ದಾದರೆ, ಜಪಾನು ಎಂಥ ಹೀನಸ್ಥಿತಿಯಲ್ಲಿದೆ ಎಂಬುದು ಗೊತ್ತಾಗುವದು.

ಈ ಮೊದಲು ಜಪಾನಕ್ಕೆ ಬರುತ್ತಿದ್ದ ಆಯಾತದ ಸಾಮಾನುಗಳು ಇಂದು ಬದಲಾವಣೆ ಹೊಂದಿ ಬೇರೆ ಆಕಾರವನ್ನು ತಾಳಿವೆ. ೧೯ನೆಯ ಶತಮಾನದ ವರೆಗೆ ಜಪಾನವು ಹತ್ತಿ, ಉಣ್ಣೆ, ರೇಶ್ಮೆಗೆ ಬೇಕಾಗುವ ಸಾಮಾನುಗಳನ್ನು ಪರದೇಶಗಳಿಂದ ಪಡೆಯುತ್ತಿದ್ದಿತು; ಆದರೆ ಇಂದು ಜಪಾನವು ಅವೇ ಪದಾರ್ಥಗಳನ್ನು ಹೆಚ್ಚು ಪ್ರಮಾಣದಲ್ಲಿ ನಿರ್ಯಾತಮಾಡುವ ಸಾಮರ್ಥ್ಯವನ್ನು ಸಂಪಾದಿಸಿದೆ. ಮಹಾಯುದ್ಧದ ಮೊದಲು ನಿರ್ಯಾತದ ಪದಾರ್ಥಗಳಲ್ಲಿ ೧೦೦ ಕ್ಕೆ ೩೪ ರಷ್ಟು ತಯಾರಿಸಿದ ವಸ್ತುಗಳಿರುತ್ತಿದ್ದವು. ಆದೇ ಯುದ್ಧ ಮುಗಿದನಂತರ ೧೦೦ ಕ್ಕೆ ೪೪ ರಂತೆ ಈ ಶಕ್ತಿಯು ಬೆಳೆಯಿತು. ೧೯೩೬ ರಲ್ಲಿ ೬೮ ರ ಮನೆಯನ್ನು ಮುಟ್ಟಿತು. ಆಯಾತ ವಸ್ತುಗಳ ಸ್ಥಿತಿಯೇ ಬೇರೆ ಇರುತ್ತದೆ. ೧೯೩೦ ರಿಂದ, ತಯಾರಿಸಿದ ಆಯಾತ ವಸ್ತುಗಳು ೧೦೦ ಕ್ಕೆ ೧೯ ರಿಂದ ೧೨ ಕ್ಕೆ ಇಳಿಯುತ್ತ ಬಂದಿತು. ಕಚ್ಚಾಮಾಲುಗಳು ೧೦೦ ಕ್ಕೆ ೫೪ ರಿಂದ ೬೧ ರ ವರೆಗೆ ಹೆಚ್ಚುತ್ತ ಬಂದವು. ಇತ್ತೀಚೆಗೆ ಜಪಾನವು ಆಹಾರ ಪದಾರ್ಥಗಳನ್ನು ಹೆಚ್ಚಿಗೆ ತಯಾರಿಸುವದರಿಂದ ೧೦೦ ಕ್ಕೆ ೧೫ ರಂತೆ ಬರುತ್ತಿದ್ದ ಆಹಾರ ಪದಾರ್ಥಗಳು ಈಗ ೮ ಕ್ಕೆ ಇಳಿದಿವೆ. ಜಪಾನಿನ ನಿರ್ಯಾತ ವಸ್ತುಗಳಲ್ಲಿ ಹತ್ತಿ, ರೇಶಿಮೆ, ಕೃತ್ರಕ ರೇಶಿಮೆಗಳಿಂದ ತಯಾರಿ

ಸಿದ ಬಟ್ಟೆಗಳೇ ಹೆಚ್ಚು. ೧೯೧೯ ರಲ್ಲಿ ಬಟ್ಟೆಗಳ ವ್ಯಾಪಾರವೇ ಒಟ್ಟು ನಿರ್ಯಾತಿನ ಪದಾರ್ಥಗಳಲ್ಲಿ ೧೦೦ ಕ್ಕೆ ೫೮ ರಂತಿದ್ದು ಅದೇ ೧೯೨೯ ರಲ್ಲಿ ೬೯ ರಷ್ಟಾಯಿತು.

ಕೆಲವು ವರ್ಷಗಳ ವರೆಗೆ ಒಣ ರೇಶಿಮೆಯು ನಿರ್ಯಾತ ವ್ಯಾಪಾರ ದಲ್ಲಿ ೧೦೦ ಕ್ಕೆ ೩೦, ೪೦ ರಂತಿದ್ದಿತು. ಆದರೆ ಅಮೇರಿಕವು ತನ್ನ ಆರ್ಥಿಕ ಮುಗ್ಗಟ್ಟಿನ ಮೂಲಕ ರೇಶಿಮೆಯನ್ನು ಹೆಚ್ಚಾಗಿ ಕೊಂಡುಕೊಳ್ಳದ್ದರಿಂದ ೧೯೩೬ ರಲ್ಲಿ ಅದರ ಪ್ರಮಾಣವು ೧೦೦ ಕ್ಕೆ ೧೪ ಕಕ್ಕೆ ಇಳಿಯಿತು. ದರವೂ ಕೂಡ ಹಿಂದಿನಗಿಂತ ಅರ್ಧದಷ್ಟು ಕಡಿಮೆಯಾಗಿರುವುದು. ಹೀಗಾಗಿ ಜಪಾನಿಯರು ಕಷ್ಟಕ್ಕೀಡಾಗಿರುವರು. ಅಮೇರಿಕೆಯ ಆರ್ಥಿಕ ಸ್ಥಿತಿಯ ಮೇಲೆ ಜಪಾನದ ಸ್ಥಿತಿಯೂ ಅವಲಂಬನವಾಗಿರುತ್ತದೆ. ೧೯೩೧ ರಲ್ಲಿ ಜಪಾನಿನ ನಾಣ್ಯದ ಬೆಲೆಯು ಇಳಿದದ್ದರಿಂದಲೂ, ಆಯಾತ ಪದಾರ್ಥಗಳ ಬೆಲೆಯು ಇಮ್ಮಡಿಯಾದ್ದರಿಂದಲೂ, ಜಪಾನವು ತನ್ನ ಕೈಗಾರಿಕೆಗಳನ್ನೆಲ್ಲಿ ನಿಲ್ಲಿಸಿಬಿಡುವುದೋ ಎಂಬ ಭಯ ಬೇರೆ ಇದ್ದಿತು. ಆದರೆ ೧೯೩೧ ರ ಮುಂಚಿತವಾಗಿ, ಜಪಾನು ಕಡಿಮೆ ಬೆಲೆಗೆ ಹೇರಳವಾಗಿ ಹತ್ತಿಯನ್ನು ಕೊಂಡು ಸಂಗ್ರಹಿಸಿ, ಕೊಂಡದ್ದರಿಂದ ಬಟ್ಟೆಗಳ ಹುಟ್ಟುವಳಿಗೆ ಬಹಳೇ ಅನುಕೂಲವಾಯಿತು. ಕಾರಖಾನೆಗಳ ಆಡಳಿತೆಯಲ್ಲಿ ಹೆಚ್ಚು ಕಡಿಮೆಯಾದ್ದರಿಂದ ೧೯೩೧ ರಲ್ಲಿ ಬಟ್ಟೆಯ ನಿರ್ಯಾತದ ೨೧ ಕೋಟಿ ಎನ್ನುಗಳ ಬೆಲೆಯು ೧೯೩೪ ರಲ್ಲಿ ೫೦ ಕೋಟಿ ಎನ್ನುಗಳಾಯಿತು. ಮೂರೇ ವರುಷಗಳಲ್ಲಿ ೩೦ ಕೋಟಿ ಎನ್ನುಗಳ ಬಟ್ಟೆಯು ಹೊರಗೆ ಹೋಗಲು ಸಾಧ್ಯವಾಯಿತು. ಈಗ ಎರಡು ವರುಷಗಳಿಂದ ಹತ್ತಿಯನ್ನು ಕೊಳ್ಳುವುದು ಕಡಿಮೆಯಾಗಿದ್ದರೂ ೧೯೩೬ ರಲ್ಲಿ ೪೮೧ ಕೋಟಿ ಎನ್ನುಗಳ ಬಟ್ಟೆಯು ನಿರ್ಯಾತಮಾಡಲ್ಪಟ್ಟಿತು. ಎಂಟು ವರುಷಗಳ ಹಿಂದೆ ಇಲ್ಲಿಗೆ ಬರುತ್ತಿದ್ದ ಕೃತಕ ರೇಶಿಮೆಯು ಇಂದು ಸಿದ್ಧವಾದ ನಿರ್ಯಾತ ವಸ್ತುವಾಗಿದೆ. ೧೯೩೦ ರಲ್ಲಿ ಮೂರೂವರೆ ಕೋಟಿ ಎನ್ನುಗಳ ಕೃತಕ ರೇಶಿಮೆಯ ಬಟ್ಟೆಯು ನಿರ್ಯಾತವಾಯಿತು. ಅದೇ ೧೯೩೬ ರಲ್ಲಿ ೧೪ ಕೋಟಿ ಎನ್ನುಗಳ ವರೆಗೆ ಬಂದಿತು. ೧೯೩೦ ರಲ್ಲಿ ಅಮೇರಿಕೆಯು ರೇಶಿಮೆಯ ಬಟ್ಟೆಯ ಮೇಲೆ ವಿಪರೀತ ಸುಂಕವನ್ನು ಹೇರಿದ್ದರಿಂದ ಕೃತಕ

ರೇಶಿಮೆಯ ಬಟ್ಟೆಯನ್ನು ತಯಾರಿಸಿ, ಇಂಡಿಯಾ, ಚೀನಾ, ಈ ಬಡದೇಶಗಳಿಗೆ ನಿರ್ಯಾತಗೊಳಿಸಲು ಆರಂಭಿಸಿತು. ಇದಲ್ಲದೆ ಪ್ರತಿವರುಷವೂ ಪರದೇಶದಿಂದ ಬರುತ್ತಿದ್ದ ಹತ್ತುಕೋಟಿ ಎನ್ನುಗಳ ಉಣ್ಣೆಬಟ್ಟೆಯು ಇಂದು ಮಾಯವಾಗಿ ಜಪಾನವೇ ಅದೇ ಬಟ್ಟೆಯನ್ನು, ಪರದೇಶಗಳಿಗೆ ಕಳಿಸುವ ಸ್ಥಿತಿಯಲ್ಲಿದೆ. ಜಪಾನಿಯರು ಪಾಶ್ಚಿಮಾತ್ಯರ ಉಡುಪಿನ ಅನುಕರಣೆಯನ್ನು ಮಾಡತೊಡಗಿದ್ದರಿಂದ ಉಣ್ಣೆಬಟ್ಟೆಯ ಪ್ರಯೋಜನೆಯು ಹೆಚ್ಚುತ್ತಲಿದೆ. ಇದರಿಂದ ಒಣ ಉಣ್ಣೆಯು ಇಲ್ಲಿಗೆ ಹೆಚ್ಚಾಗಿ ಬರತೊಡಗಿತು. ೧೯೩೬ ರಲ್ಲಿ ೨೦ ಕೋಟಿ ಎನ್ನು ಒಣ ಉಣ್ಣೆಯು ಆಯಾತವಾಯಿತು. ಮಹಾಯುದ್ಧದ ಮೊದಲಿನ ಬೆಲೆಗೆ ಇದನ್ನು ಹೋಲಿಸಿ ನೋಡಿದರೆ ಹತ್ತುಪಟ್ಟು ಹೆಚ್ಚಾಗಿದೆ ಎಂದು ಕಂಡುಬರುವದು.

೧೯೩೧ ರಿಂದ ಕಬ್ಬಿಣ ಹಾಗೂ ಕಬ್ಬಿಣದ ಸಾಮಾನುಗಳ ನಿರ್ಯಾತವು ಬಹಳವಾಗಿ ಬೆಳೆದಿದೆ. ಆದರೆ ಆಯಾತವಾದ ಶುದ್ಧ ಕಬ್ಬಿಣದ ಬೆಲೆಯು ನಿರ್ಯಾತವಾದ ಕಬ್ಬಿಣದ ಪದಾರ್ಥಗಳ ಬೆಲೆಯಲ್ಲಿ ೧೦೦ ಕ್ಕೆ ೬೦ ರಷ್ಟು ಹೆಚ್ಚಾಗಿದೆ. ಇಷ್ಟು ಕಬ್ಬಿಣವನ್ನು ಜಪಾನಿಯರು ಕೊಂಡುಕೊಳ್ಳಲು ಈಗ ನಡೆಯುತ್ತಿರುವ ಯುದ್ಧವೇ ಕಾರಣವಾಗಿದೆ. ಜಪಾನಿಯರ ಕಣ್ಣಿಗೆ ಎಲ್ಲಿಯಾದರೂ ಕಬ್ಬಿಣದ ಹಳೆಯ ಹಡಗಗಳು ಅಥವಾ ಬೇರೆ ಕಬ್ಬಿಣದ ಸಾಮಾನು ಕಣ್ಣಿಗೆ ಬಿದ್ದರೆ ಜಪಾನಿಯರು ತಕ್ಷಣವೇ ಅವುಗಳನ್ನು ಕೊಂಡುಕೊಂಡು ಸ್ವದೇಶಕ್ಕೆ ಸಾಗಿಸಿ ಯುದ್ಧದ ಸಲಕರಣೆಗಳನ್ನು ತಯಾರಿಸಲು ಉಪಯೋಗಿಸುತ್ತಾರೆ.

ಯಂತ್ರಗಳು ಹಾಗೂ ಯಾಂತ್ರಿಕ ಇತರ ಸಾಮಾನುಗಳ ನಿರ್ಯಾತದ ವ್ಯಾಪಾರವು ಹೆಚ್ಚುತ್ತಿದ್ದರೂ ಅದೇ ವಸ್ತುಗಳ ಆಯಾತವು ಇತ್ತೀಚೆಗೆ ಹೆಚ್ಚಾಗಿರುವದು. ಸದ್ಯಕ್ಕೆ ಜಪಾನು ಯುದ್ಧದಲ್ಲಿ ತೊಡಗಿದೆ. ವಿಮಾನ ಮೊದಲಾದ ಯಂತ್ರಗಳನ್ನು ಅವಶ್ಯವಾಗಿ ಕೊಳ್ಳಬೇಕಾಗಿದೆ. ಜಪಾನದಲ್ಲಿದ್ದ ಕಾರಖಾನೆಗಳು ಯುದ್ಧದ ಸಲಕರಣೆಗಳನ್ನೇ ತಯಾರಿಸಬೇಕಾಗಿರುವದರಿಂದ ಕಾರಖಾನೆಗಳ ಒಡೆಯರು ಕೈಗಾರಿಕೆಗೆ ಬೇಕಾದ ಯಾಂತ್ರಿಕ

ಸಾಮಾನುಗಳನ್ನು ಪರದೇಶಗಳಿಂದ ತರಿಸಿಕೊಳ್ಳುತ್ತಾರೆ. ಅದರಿಂದ ಆಯಾತದ ಬೆಲೆಯು ನಿರ್ಯಾತಕ್ಕಿಂತ ಹೆಚ್ಚಾಗಿದೆ. ಯುದ್ಧವು ಒಮ್ಮೆ ಮುಗಿದ ನಂತರ ಜಪಾನವು ಪರದೇಶಗಳಿಂದ ಕಬ್ಬಿಣವನ್ನು ತರಿಸಿಕೊಂಡು ಸಾಮಾನುಗಳನ್ನು ತಯಾರಿಸಿ ಸಾಕಷ್ಟು ಗಿರಾಕಿಗಳನ್ನು ಪಡೆಯುವದರಲ್ಲಿ ಸಂದೇಹವಿಲ್ಲ. ನಿರ್ಯಾತ ವ್ಯಾಪಾರದಲ್ಲಿ ಮಣ್ಣಿನ, ಗಾಜಿನ ಸಾಮಾನುಗಳೂ, ಕಂದೀಲು, ಗೊಂಬೆ ಮೊದಲಾದವು ಹೆಚ್ಚಾಗಿಯೇ ಇರುತ್ತವೆ. ಈ ಸಾಮಾನುಗಳ ಹುಟ್ಟುವಳಿಗೆ ಅಗ್ಗವಾದ ಕೂಲಿ, ಕಡಿಮೆ ದರಕ್ಕೆ ದೊರೆಯುವ ವಿದ್ಯುಚ್ಛಕ್ತಿ ಅನುಕೂಲವಿರುವದರಿಂದ ನಿರ್ಯಾತವು ವೃದ್ಧಿಗೊಳ್ಳಲು ಸುಲಭವಾಗಿದೆ.

ಜಪಾನವು ಕಣಿಗಳಲ್ಲಿ ದೊರೆಯುವ ಎಣ್ಣೆಗೆ ಬಡದೇಶವಾಗಿರುವುದು. ಎಣ್ಣೆಯು ಪರದೇಶಗಳಿಂದ ಬಾರದಿದ್ದರೆ, ಇಲ್ಲಿಯ ಉದ್ಯಮಗಳೆಲ್ಲ ಸಾಗಲಾರವು. ೧೯೩೬ ರಲ್ಲಿ ೧೭ ಕೋಟಿ ಎನ್ನುಗಳ ಶುದ್ಧ-ಅಶುದ್ಧ ಲೋಹದೆಣ್ಣೆಯು ಉಪಯೋಗಿಸಲ್ಪಟ್ಟಿತು. ಇದರಲ್ಲಿ ೧೦೦ ಕ್ಕೆ ೮ ರಂತೆ ಮಾತ್ರ ಜಪಾನ ದೇಶದಲ್ಲಿಯೇ ಹುಟ್ಟಿದುದು. ಜಪಾನದಲ್ಲಿಯೇ ಎಣ್ಣೆಯ ಕಣಿಗಳು ಹೇರಳವಾಗಿ ದೊರೆಯುವ ವರೆಗೆ ಜಪಾನದೇಶವು ಎಣ್ಣೆಯ ಒಳ್ಳೇ ಗಿರಾಕಿಯಾಗಿರುತ್ತದೆ. ಸದ್ಯದ ಯುದ್ಧದಲ್ಲಿ ಭೂ, ಜಲ ಸೈನಿಕರು ಪೆಟ್ರೋಲನ್ನೇ ಉಪಯೋಗಿಸುವದರಿಂದಲೂ, ಆರ್ಥಿಕ-ಮುಗ್ಗಟ್ಟಿನ ಮೂಲಕವೂ ಇಂದು ಜಪಾನಿನಲ್ಲಿ ಮೋಟಾರಿನೊಡೆಯರಿಗೆ ೩ ಗ್ಯಾಲನ್ನುಗಳಿಗಿಂತ ಹೆಚ್ಚಿಗೆ ಪೆಟ್ರೋಲನ್ನು ಕೊಡಕೂಡದೆಂಬ ಕಟ್ಟಳೆಯಾಗಿದೆ. ಎಣ್ಣೆಯ ಅಭಾವದಲ್ಲಿ ಕಲ್ಲಿದ್ದಲಿಯ ಗ್ಯಾಸಿನಿಂದ ಮೋಟಾರುಗಳು ನಡೆಯಿಸಲ್ಪಡುತ್ತಿವೆ.

**ನಿರ್ಯಾತ ವ್ಯಾಪಾರದ ದೇಶಗಳು:—** ಜಪಾನದ ಬಹುಭಾಗದ ನಿರ್ಯಾತ ವಸ್ತುಗಳು ಏಶಿಯಾ, ಉತ್ತರ ಅಮೇರಿಕೆಗಳಿಗೆ ಕಳಿಸಲ್ಪಡುತ್ತಿವೆ. ೧೯೩೬ ರಲ್ಲಿ ನಿರ್ಯಾತ ವಸ್ತುವಿನ ಮುಕ್ಕಾಲು ಭಾಗವು, ಮೇಲಿನ ಎರಡೇ ದೇಶಗಳಿಗೆ ಕಳಿಸಲ್ಪಟ್ಟಿದೆ; ಏಶಿಯಾ ಖಂಡವೊಂದನ್ನೇ ತೆಗೆದುಕೊಂಡರೆ ೧೦೦ ಕ್ಕೆ ೫೫ ರಂತೆ ಕಳಿಸಲ್ಪಡುತ್ತದೆ. ೧೯೩೬ ರಲ್ಲಿ ೨೫೦ ಕೋಟಿ

ಎನ್ನುಗಳ ಸಾಮಾನು ನಿರ್ಯಾತವಾಯಿತು. ಅದರಲ್ಲಿ ೩೦ ಕೋಟಿ ಯುರೋಪಕ್ಕೆ, ೨೦ ಕೋಟಿ ಆಫ್ರಿಕಕ್ಕೆ, ೧೨ ಕೋಟಿ ದಕ್ಷಿಣ ಅಮೇರಿಕಕ್ಕೆ, ೭ ಕೋಟಿ ಆಸ್ಟ್ರೇಲಿಯಾಕ್ಕೆ ಸಾಮಾನುಗಳನ್ನು ಕಳಿಸಲಾಯಿತು.

ಜಪಾನದ ಗಿರಾಕಿಯ ದೇಶಗಳಲ್ಲಿ ಸಂಯುಕ್ತ ಅಮೇರಿಕವು ಉತ್ತಮವಾದ ಗಿರಾಕಿ; ಜಪಾನಿಯರ ವಸ್ತುಗಳನ್ನು ಅಮೇರಿಕದವರೇ ಹೆಚ್ಚಾಗಿ ಕೊಳ್ಳುತ್ತಾರೆ. ೧೯೩೬ ರಲ್ಲಿ ಅಮೇರಿಕೆಯವರು ಇವರಿಂದ ೬೦ ಕೋಟಿ ಎನ್ನುಗಳ ಸಾಮಾನುಗಳನ್ನು ಕೊಂಡುಕೊಂಡರು. ಇತ್ತೀಚೆಗೆ ಅಮೇರಿಕೆಯ ಆರ್ಥಿಕ ಸ್ಥಿತಿಯು ಕೆಟ್ಟದ್ದರಿಂದ, ಜಪಾನಿನ ರೇಶಿಮೆಯು ಅಷ್ಟು ಹೆಚ್ಚಾಗಿ ಹೋಗುವದಿಲ್ಲ. ೧೯೩೬ ರಲ್ಲಿ ಜಪಾನಿಯರ ಗೊಂಬೆ ಸಾಮಾನುಗಳ ನಿರ್ಯಾತದಲ್ಲಿ ೧೦೦ ಕ್ಕೆ ೩೪ ರಂತೆ, ಗಿಲಾಯಿ ಮತ್ತು ಟಿನ್ ಸಾಮಾನುಗಳು ೧೦೦ ಕ್ಕೆ ೩೦ ರಂತೆ, ಕಂದೀಲುಗಳು ೧೦೦ ಕ್ಕೆ ೧೫ ರಂತೆ ಅಮೇರಿಕೆಗೆ ಕಳಿಸಲ್ಪಟ್ಟವು.

ಚೀನಾದೇಶವು ಮೊದಲಿನಿಂದಲೂ ಜಪಾನಿಯರ ನಿರ್ಯಾತ ವಸ್ತುಗಳಿಗೆ ತವರುಮನೆಯಾಗಿದೆ. ಆದರೆ ೧೯೩೧ ರಲ್ಲಿ ಮಂಚೂರಿಯಾದ ಘಟನೆಯ ನಂತರ ಚೀನಿಯರು ಜಪಾನದ ಪದಾರ್ಥಗಳನ್ನು ಬಹಿಷ್ಕರಿಸಿದರು; ವಿಪರೀತ ಸುಂಕವನ್ನು ಹೇರಿದರು. ತಮ್ಮ ದೇಶದಲ್ಲಿ ಸಾಮಾನು ಪ್ರವೇಶಿಸ ಕೂಡದೆಂದು ನಿರ್ಬಂಧಿಸಿದರು. ಆದ್ದರಿಂದಲೆ ಜಪಾನಿಯರು ಕೆರಳಿ ತಮ್ಮ ಹೇಳಿಕೆಯಂತೆ ಚೀನಿಯರು ನಡೆದುಕೊಳ್ಳಬೇಕೆಂಬ ಬಗ್ಗೆ ಇಂದು ಯುದ್ಧವನ್ನು ಹೂಡಿರುತ್ತಾರೆ. ಇವರಿಬ್ಬರ ನಡುವೆ ಸ್ನೇಹಬಂಧನವುಂಟಾಯಿತೆಂದರೆ ಜಪಾನಿಯರ ಸಾಮಾನುಗಳಿಗೆ ಚೀನಾದೇಶವು ಒಳ್ಳೆ ಗಿರಾಕಿಯಾಗುವದರಲ್ಲಿ ಸಂದೇಹವಿಲ್ಲ. ಜಪಾನವು ಚೀನಾದೇಶದ ಒಣ ಪದಾರ್ಥಗಳಿಗೆ ( Raw materials ) ಒಳ್ಳೇ ಗಿರಾಕಿಯಾಗಿ, ಎರಡೂ ದೇಶದ ಆರ್ಥಿಕ ಸಂಪತ್ತು ಉತ್ತಮವಾಗಲು ಆಸ್ಪದವಿದೆ.

## ಆಯಾತ ವ್ಯಾಪಾರದ ಪಡಮೂಲೆಗಳು:—

ಜಪಾನಕ್ಕೆ ಬರುತ್ತಿರುವ ಸಾಮಾನುಗಳಲ್ಲಿ ೧೦೦ ಕ್ಕೆ ೭೦ ರಂತೆ ಏಶಿಯಾ, ಉತ್ತರ ಅಮೇರಿಕೆಗಳಿಂದ ಬರುತ್ತಿದೆ. ಮಹಾಯುದ್ಧದ ಮೊದಲು

ಏಶಿಯಾ ಖಂಡದಿಂದಲೇ ಹೆಚ್ಚಾಗಿ ಕಚ್ಚಾಮಾಲು ಇಲ್ಲಿ ಬರುತ್ತಿತ್ತು. ೧೯೩೬ ರಲ್ಲಿ ಜಪಾನವು ತರಿಸಿಕೊಂಡ ಒಟ್ಟು ೮೫ ಕೋಟಿ ಎನ್ನುಗಳ ಹತ್ತಿಯಲ್ಲಿ ೩೭ ಕೋಟಿ ಎನ್ನು ಅಮೇರಿಕೆಯಿಂದಲೂ, ೩೧ ಕೋಟಿ ಭಾರತದಿಂದಲೂ ಬಂದಿರುತ್ತದೆ. ಮಹಾಯುದ್ಧಕ್ಕೆ ಮೊದಲು ಯುರೋಪದಿಂದ ಯಾಂತ್ರಿಕ ಸಾಮಾನುಗಳು ಇಲ್ಲಿಗೆ ಹೆಚ್ಚು ಪ್ರಮಾಣದಿಂದ ಬರುತ್ತಿದ್ದವು. ಆದರೆ ಯುದ್ಧವು ಮುಗಿದನಂತರ ಅಮೇರಿಕೆಯು ಅದರ ಸ್ಥಳವನ್ನಾಕ್ರಮಿಸಿರುತ್ತದೆ. ಕಳೆದ ಕೆಲವರುಷಗಳಿಂದ ಜಪಾನಕ್ಕೆ ಬರುವ ಒಟ್ಟು ಪದಾರ್ಥಗಳಲ್ಲಿ ಮೂರರಲ್ಲೊಂದು ಪಾಲು ಅಮೇರಿಕೆಯಿಂದಲೇ ಬರುತ್ತಿದೆ. ಅಮೇರಿಕೆಗೆ ಗ್ರೇಟ್‌ಬ್ರಿಟನ್, ಕಾನಡಾ ಬಿಟ್ಟರೆ ಜಪಾನವೇ ಮೂರನೆಯ ಗಿರಾಕಿಯಾಗಿದೆ. ಅಮೇರಿಕೆಯಿಂದ ನಿರ್ಯಾತವಾಗುವ ಪದಾರ್ಥಗಳಲ್ಲಿ ೧೦೦ ಕ್ಕೆ ೯ ರಂತೆ ಜಪಾನಿಗೆ ಕಳಿಸಲಾಗುತ್ತದೆ. ಶುದ್ಧ ಎಣ್ಣೆಯು ೧೦೦ ಕ್ಕೆ ೭೬ ರಂತೆ, ಚರ್ಮವು ೩೧ ರಂತೆ, ಮರದ ದಿಂಡು ( Pulp ) ೪೧ ರಂತೆ, ಸಿದ್ಧವಾದ ಕಬ್ಬಿಣ ೫೩ ರಂತೆ, ಮೋಟಾರು ೯೫ ರಂತೆ, ಯಂತ್ರಗಳು ೩೭ ರಂತೆ ಜಪಾನವು ಅಮೇರಿಕೆಯಿಂದ ಪಡೆಯುತ್ತಿರುತ್ತದೆ.

## ೪೦ ವರುಷಗಳಿಂದ ಸಾಗಿಬಂದ ಆಯಾತ-ನಿರ್ಯಾತಗಳ ಬೆಲೆ:—

| ವರುಷ | ಆಯಾತ | ನಿರ್ಯಾತ | ಒಟ್ಟು |
|---|---|---|---|
| | ( ಒಂದು ಸಾವಿರ ಎನ್ನುಗಳ ಪರಿಮಾಣ ) | | |
| ೧೮೯೭ | ೨೧೯ ೩೦೦ | ೧೬೩೧೩೫ | ೩೮೨೪೩೫ |
| ೧೯೦೭ | ೪೯೪ ೪೬೭ | ೪೩೨೪೧೨ | ೯೨೬೮೮೦ |
| ೧೯೧೭ | ೧೦೩೫೮೧೧ | ೧೬೦೩೦೦೫ | ೨೬೩೮೮೧೬ |
| ೧೯೨೭ | ೨೧೭೯೧೫೩ | ೧೯೯೨೩೮೭ | ೪೧೭೧೪೭೧ |
| ೧೯೩೫ | ೨೪೭೨೨೫೫ | ೨೪೯೯೦೭೨ | ೪೯೭೧೩೦೭ |
| ೧೯೩೬ | ೨೭೬೩೬೮೦ | ೨೬೯೨೯೭೬ | ೫೪೬೬೫೭ |

ಜಪಾನದ ಈ ವ್ಯವಹಾರವನ್ನು ಪರಿಶೀಲಿಸಿದರೆ ಒಂದೆರಡೆ ವರುಷ ಬಿಟ್ಟು ಪ್ರತಿವರುಷವೂ ನಿರ್ಯಾತಕ್ಕಿಂತ ಆಯಾತದ ಬೆಲೆಯೇ ಹೆಚ್ಚಾಗಿದ್ದು ಜಪಾನವು ರೋಖು ಹಣವನ್ನು ಪರದೇಶಗಳಿಗೆ ತೆತ್ತಿರುವುದನ್ನು ಕಾಣ

ಬಹುದು. ೧೯೩೬ ರಲ್ಲಿ ದೊರೆತ ಅಲ್ಪ ಲಾಭವೊಂದನ್ನು ಬಿಟ್ಟರೆ ಜಪಾನವು ಹಾನಿಗೀಡಾಗಿ ವ್ಯಾಪಾರವನ್ನು ನಡೆಸುತ್ತಿದೆಯೆಂದು ಕಾಣುವದು.

ಇಂದು ಜಪಾನದ ಮಾಲು ಜಗತ್ತಿನ ತುಂಬೆಲ್ಲ ಹರಡಿದ್ದರೂ, ಅಂತರ್ ರಾಷ್ಟ್ರೀಯ ವ್ಯಾಪಾರದಲ್ಲಿ ೩.೫ ರಂತೆ ( ಭಾರತದ ಪರದೇಶ ವ್ಯಾಪಾರದಷ್ಟು ) ಮಾತ್ರ ಇರುತ್ತದೆ. ಅಂತರ್ ರಾಷ್ಟ್ರೀಯ ವ್ಯಾಪಾರ ದಲ್ಲಿ ಅಮೇರಿಕೆಯು ೧೦೦ ರಲ್ಲಿ ೧೬ ಭಾಗವನ್ನು ವಹಿಸಿ ಪ್ರಥಮಸ್ಥಾನಾ ಪನ್ನವಾಗಿದೆ; ಗ್ರೇಟಬ್ರಿಟನ್ನವು ೧೦ ರ ಭಾಗವನ್ನು ವಹಿಸಿರುವುದು. ಹೀಗಾಗಿ ಜಗತ್ತಿನ ಪೇಟೆಯಲ್ಲಿ ತೀರ ಕಡಿಮೆಯ ಪ್ರಮಾಣದಿಂದ ಜಪಾನದ ವ್ಯವಹಾರವು ಸಾಗಿರುವುದೆಂದು ಹೇಳಬೇಕಾಗುವದು. ಪರದೇಶಗಳು ಜಪಾನದ ಸಾಮಾನುಗಳ ಮೇಲೆ ಹೇರಿದ ವಿಪರೀತ ಸುಂಕವನ್ನು ಎಲ್ಲಿಯು ವರೆಗೆ ಕಡಿಮೆ ಮಾಡುವದಿಲ್ಲವೋ ಅಲ್ಲಿಯ ವರೆಗೆ ಜಪಾನದ ವ್ಯಾಪಾರವು ನಷ್ಟದಿಂದಲೇ ಸಾಗತಕ್ಕದೆಂದು ಸ್ಪಷ್ಟವಾಗಿ ಕಾಣುತ್ತದೆ. ಹೊಟ್ಟೆತುಂಬಿದ ಪಾಶ್ಚಿಮಾತ್ಯ ದೇಶಗಳು ಜಪಾನಕ್ಕೆ ಸುರಳೀತವಾಗಿ ವ್ಯಾಪಾರ ಮಾಡಲು ಆಸ್ಪದ ಕೊಡದ ಹೊರತು, ಜಪಾನದಲ್ಲಿಯ ಅರೆಹೊಟ್ಟೆಯ ಕೂಲಿಕಾರರಿಗೆ ಹೊಟ್ಟೆತುಂಬ ಉಣಲು ಸಿಗಲಾರದೆಂಬ ಮಾತು ಒಡೆದು ಕಾಣುತ್ತಿದೆ. ಪೌರ್ವಾತ್ಯರಾದ ಜಪಾನಿಯರು ಕೈಗಾರಿಕೆ ಮತ್ತು ವ್ಯಾಪಾರದಲ್ಲಿ ಮುಂದ ರಿಯುವದನ್ನು ನೋಡಿ ಸಹಿಸಲಾರದೆ, ಪಾಶ್ಚಿಮಾತ್ಯರು ಹೊಟ್ಟೆಕಿಚ್ಚಿನಿಂದ ಸುಂಕವನ್ನು ಹೆಚ್ಚಿಸಿ ಇವರ ವ್ಯಾಪಾರವನ್ನು ಕುಗ್ಗಿಸಬೇಕೆಂದು ಹವಣಿ ಸುತ್ತಿದ್ದಾರೆ. ಇಂಥ ಹೇವದ ಹವಣಿಕೆಯು ಮಾಯವಾಗಿ “ ಪೂರ್ವದ ವರು, ಪಶ್ಚಿಮದವರು ” ಎಂಬ ಭೇದಭಾವವನ್ನು ಬಿಟ್ಟು ಪರಸ್ಪರ ಪ್ರೇಮ, ಸಹಕಾರಗಳಿಂದ ವರ್ತಿಸತೊಡಗಿದರೆ ಇಬ್ಬರೂ ಲಾಭವನ್ನು ಪಡೆಯಲು ಅವಕಾಶವುಂಟಾಗುವುದು. ಅಂಥ ಅನ್ಯೋನ್ಯ ಸಂಬಂಧವು ಎಂದು ಒದಗು ವುದೋ ತಿಳಿಯದಾಗಿದೆ.

---

# ಜಪಾನ ಹಿಂದುಸ್ಥಾನಗಳ ವ್ಯಾಪಾರ ಸಂಬಂಧ



ಜಪಾನ ದೇಶದ ಚರಿತ್ರೆಯು ಆಧಾರದಿಂದ ಕ್ರಿಸ್ತಶಕದ ಪೂರ್ವದಿಂದಲೂ ಜಪಾನ ಹಾಗೂ ಹಿಂದುಸ್ಥಾನಗಳ ನಡುವೆ ವ್ಯಾಪಾರವು ನಡೆಯುತ್ತಿತ್ತೆಂದು ಕಂಡುಬಂದಿದೆ. ಬೌದ್ಧಧರ್ಮವು ಇಲ್ಲಿ ಕಾಲಿಟ್ಟ ಮೇಲಂತೂ ವ್ಯಾಪಾರವೂ ಭರದಿಂದ ಸಾಗಿತ್ತೆಂದು ತಿಳಿದುಬರುತ್ತದೆ. ಇಂದಿಗೂ ಜಪಾನಿಯರು ಭಾರತವನ್ನು " ಹಿಂದೊ " (ಹಿಂದುಗಳ) ದೇಶವೆಂದು ಕರೆಯುತ್ತಾರೆ. ಭಾರತಕ್ಕೆ ಬ್ರಿಟಿಷ್ ಇಂಡಿಯಾ ಎಂಬ ಹೆಸರು ಬಿದ್ದರೂ, " ಹಿಂದೋ " ಎಂತಲೂ, ಭಾರತೀಯರನ್ನು " ಹಿಂದೋಜಿ " ಎಂತಲೂ ಕರೆಯುವ ರೂಢಿಯು ಜಪಾನಿಯರಲ್ಲಿ ವ್ಯೆಯುಂಡಿರುತ್ತದೆ. ದ್ರಾವಿಡರೂ ಜಪಾನರೊಡನೆ ವ್ಯಾಪಾರ ಮಾಡುತ್ತಿದ್ದರೆಂಬ ಬಗ್ಗೆ ಅನೇಕ ಉದಾಹರಣೆಗಳು ಈ ದೇಶದಲ್ಲಿ ದೊರೆಯುತ್ತವೆ. ದ್ರಾವಿಡರು ಪರದೇಶದವರೊಡನೆ ವ್ಯಾಪಾರ ಸಾಗಿಸಿದ್ದರೆಂಬುದರಲ್ಲಿ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಇಂದಿಗೂ " ರೋಮನ್ ಚಕ್ರಾಧಿಪತ್ಯ " ದ ಚರಿತ್ರೆಯಲ್ಲಿ ದ್ರಾವಿಡ ಭಾಷೆಯ ಹಲವಾರು ಶಬ್ದಗಳು ದೊರೆಯುವದನ್ನು ಸಂಶೋಧಕರು ಕಂಡು ಹಿಡಿದಿದ್ದಾರೆ. ಜಪಾನದ ಅನೇಕ ವಿದ್ವಾಂಸರು ತಮ್ಮ ಮೂಲ ಪುರುಷರಲ್ಲಿ " ದ್ರಾವಿಡರು " ಕೂಡ ಸೇರಿಕೊಂಡಿದ್ದರೆಂದು ದೃಷ್ಟಾಂತಗಳಿಂದ ಸಿದ್ಧಪಡಿಸಿದ್ದಾರೆ. ಕೆಲ ಜಪಾನಿಯರ ಮುಖಚರ್ಯೆಯು ದ್ರಾವಿಡರನ್ನು ಹೋಲುತ್ತದೆಂದು ಮುಖಲಕ್ಷಣ ಪರೀಕ್ಷಕರು ಕಂಡು ಹಿಡಿಯುವಂತಿದೆ. ಪೂರ್ವಕಾಲದಲ್ಲಿ ದ್ರಾವಿಡರು ನೇರವಾಗಿ ಭಾರತದಿಂದ

ಜಪಾನದೊಡನೆ ವ್ಯವಹಾರವನ್ನು ನಡಿಸದಿದ್ದರೂ, ಜಾವಾ, ಮಲಯಾ ದ್ವೀಪಗಳಿಗೆ ಸಾಮಾನು ರವಾನಿಸಿ, ಅಲ್ಲಿಯ ತಮ್ಮ ಜನರ ಮುಖಾಂತರ ಜಪಾನದೊಡನೆ ವ್ಯಾಪಾರ ಮಾಡುತ್ತಿದ್ದರೆಂದು ತಿಳಿದುಬಂದಿದೆ. ಈ ದ್ರಾವಿಡ ವ್ಯಾಪಾರಸ್ಥರಲ್ಲಿ ಕನ್ನಡಿಗರ ಸಂಖ್ಯೆಯಿತ್ತೆಂದು ಬೇರೆ ಹೇಳುವ ಕಾರಣವಿಲ್ಲ. ಕರ್ನಾಟಕಕ್ಕೂ ಸಮುದ್ರತೀರವಿರುವದರಿಂದ ಕನ್ನಡಿಗರೂ ಪರದೇಶಗಳೊಡನೆ ವ್ಯಾಪಾರಸಂಬಂಧವನ್ನು ಇಟ್ಟಿರಲೇಬೇಕೆಂದು ಹೇಳ ಬಹುದು. ವಿಜಯನಗರದ ಸಾಮ್ರಾಜ್ಯದ ಆಳಿಗಾಲದವರೆಗೆ ಕನ್ನಡಿಗರು ಪರದೇಶವ್ಯಾಪಾರವನ್ನು ಸಾಕಷ್ಟು ಮಾಡುತ್ತಿದ್ದರೆಂದು ಇತಿಹಾಸವೇ ಹೇಳುತ್ತಿದೆ.

ನಿಜವಾದ ವ್ಯಾಪಾರವು ಈ ಎರಡು ದೇಶಗಳ ನಡುವೆ ೧೮೭೭ ರಿಂದ ಆರಂಭವಾಯಿತು. ಮೊದಮೊದಲು ಇಂಗ್ಲಿಷ ವರ್ತಕರೇ ಇಂಡಿಯಾ ಸರಕನ್ನು ಜಪಾನಿಗೆ ಸಾಗಿಸಿ, ಅಲ್ಲಿಯದನ್ನು ಇಂಡಿಯಾಕ್ಕೆ ಸಾಗಿಸುವುದರಲ್ಲಿ ತೊಡಗಿದ್ದರು. ಜಪಾನವೆ ೧೮೮೯ರಲ್ಲಿ ಇಂಡಿಯಾದ ಹತ್ತಿಗೆ ಒಳ್ಳೆ ಗಿರಾಕಿ ಯಾಗಿತ್ತು. ದಿವಂಗತ ಜೆ. ಎನ್. ಟಾಟಾರವರು ತಮ್ಮನಾದ ಆರ್. ಡಿ. ಟಾಟಾರವರೊಡನೆ ಜಪಾನಕ್ಕೆ ಆಗಮಿಸಿ ವ್ಯಾಪಾರದ ಯೋಗ್ಯ ಒಪ್ಪಂದ ವನ್ನು ಮಾಡಿಕೊಂಡು ಬಂದರು. ಇಂಡಿಯಾ, ಜಪಾನದ ವ್ಯಾಪಾರಸ್ಥರು ಇಂಗ್ಲಿಷ ವರ್ತಕರ ಸಹಾಯವನ್ನು ಬಿಟ್ಟು ವ್ಯಾಪಾರವನ್ನು ಸಾಗಿಸಿದ್ದರಿಂದ ಸಹಿಸಲಾರದೆ ಇಂಗ್ಲಿಷರ ಪಿ. ಆ್ಯಂಡ್ ಓ. ಹಡಗಿನವರು ಇಂಡಿಯಾ ದಿಂದ ಜಪಾನಕ್ಕೆ ಒಂದು ಟನ್ ಹತ್ತಿಯನ್ನು ಒಯ್ಯಲು ೧೮ ರೂಪಾಯಿ ಗಳ ತುಟ್ಟಿಯ ಬಾಡಿಗೆಯನ್ನು ತೆಗೆದುಕೊಂಡರು. ಈ ರೀತಿಯ ಬಾಡಿಗೆ ಯನ್ನು ಜಪಾನಿಯರು ತೆತ್ತಲಾರದೆ ಹತ್ತಿಯನ್ನು ತರಿಸಿಕೊಳ್ಳಲು ಬ್ರಿಟಿಶ್ ವರ್ತಕರ ಮರೆಹೊಕ್ಕರು. ಆದರೆ ವರ್ತಕಶಿರೋಮಣಿಗಳಾದ ಟಾಟಾರವರು ಎದೆಗುಂದದೆ ತಮ್ಮದೆ ಒಂದು ಹಡಗು ಸಂಸ್ಥೆಯನ್ನು ಸ್ಥಾಪಿಸುವದೊಳಿ ತೆಂದು ಒಗೆದು, ಜಪಾನಿಯರೊಡನೆ ಪಾಲುಗಾರಿಕೆಯ ಮೇಲೆ 'ಎನ್. ವೈ. ಕೆ.' ಎಂಬ ಹಡಗವನ್ನು ಸಿದ್ಧಗೊಳಿಸಿದರು. ಇವರು ಮಾಡಿಕೊಂಡ ಈ ಅನುಕೂಲತೆಗೆ ಪ್ರತಿಯಾಗಿ 'ಪಿ. ಆ್ಯಂಡ್ ಓ.'ದವರು ತುರುಸಿನ ಮೇಲೆ ೧೮ ರೂ. ಇದ್ದ ಬಾಡಿಗೆಯ ದರವನ್ನು ೧ ರೂ. ೮ ಆ. ಗಳಿಗೆ ಇಳಿಸಿದರು.

ಇದನ್ನು ಕಂಡು ಜಪಾನ ಸರಕಾರವು ಎನ್. ವೈ. ಕೆ. ಕಂಪನಿಗೆ ಹಣದ ಸಹಾಯವನ್ನು ಮಾಡಿ ಪರದೇಶದ ಹಡಗಿನ ಸ್ಪರ್ಧೆಯನ್ನು ನಿಲ್ಲಿಸಿತು. ಅಂದಿನಿಂದ ಪಿ. ಆ್ಯಂಡ್ ಓ. ಕಂಪನಿಯವರು ಒಪ್ಪಂದ ಮಾಡಿಕೊಂಡು ಇಂದಿನ ವರೆಗೂ ಸ್ನೇಹಪೂರ್ವಕವಾಗಿ ನಡೆದುಕೊಳ್ಳುವದರಿಂದ ಯಾವ ತೊಂದರೆಯಿಲ್ಲದೆ ಸಾಮಾನು ಸಾಗಿಸುವದು ಸುಸೂತ್ರವಾಗಿ ಸಾಗಿದೆ. ೧೮೯೯ರಲ್ಲಿ ಜಪಾನದೊಡನೆ ಪಾಲುಗಾರಿಕೆಯಲ್ಲಿ ನಡೆಯಿಸಿದ ಹಡಗು ಕಂಪನಿಯು ಭರದಿಂದ ಬೆಳೆಯುತ್ತಿರಲು ಕೆಲವು ವಿಷಯಗಳಲ್ಲಿ ತೊಂದರೆಗಳುಂಟಾಗಲು ಟಾಟಾರವರು ತಮ್ಮ ಅರ್ಧ ಪಾಲನ್ನು ಜಪಾನಿಯರಿಗೆ ಮಾರಿಬಿಟ್ಟರು. ಅಂದಿನಿಂದ ಇಂದಿನ ವರೆಗೂ ಜಪಾನಿಯರೇ ಹಡಗಿನ ಈ ಸಂಸ್ಥೆಯನ್ನು ಸಾಗಿಸುತ್ತಲಿದ್ದಾರೆ.

೧೯೦೫ರಲ್ಲಿ ಇಂಗ್ಲಿಷ್ ಜಪಾನ ಸ್ನೇಹದ ಒಪ್ಪಂದವಾಗಿ, ಯುರೋಪಿನ ಯಾವ ದೇಶವಾದರೂ ಇಂಗ್ಲಿಷರ ಸ್ವಾಧೀನವಾದ ಇಂಡಿಯಾದಮೇಲೆ ದಂಡೆತ್ತಿ ಬಂದರೆ ಜಪಾನಿಯರು ಇಂಗ್ಲಿಷರ ಸಹಾಯಕ್ಕೆ ಬರಬೇಕೆಂಬ ಕರಾರವಾಗಿತ್ತು. ಜಪಾನಿಯರು ಇಂಗ್ಲಿಷರ ಸ್ನೇಹದಿಂದ ಜಗತ್ತಿನಲ್ಲಿ ಪ್ರಥಮ ಶ್ರೇಣಿಯ ರಾಷ್ಟ್ರಗಳ ಸಮಾನತೆ ಹೊಂದಿದರೂ, ಜಪಾನಿಯರ ಸ್ನೇಹದಿಂದ ಇಂಗ್ಲಿಷರು ಇಂಡಿಯಾದ ಬಗ್ಗೆ ಪೂರ್ವಗೋಲಾರ್ಧದಲ್ಲಿ ಅಧೈರ್ಯವಿಲ್ಲದೆ ತಮ್ಮ ವೈರಿಗಳನ್ನು ಎದುರಿಸಲು ಸಾಧ್ಯವಾಯಿತು. ಮಹಾಯುದ್ಧದ ಕಾಲಕ್ಕೂ ಈ ಒಪ್ಪಂದವು ಹಾಗೆಯೇ ಇದ್ದುದರಿಂದ ಇಂಗ್ಲಿಷರು ಯಾವ ಭಯವಿಲ್ಲದೆ ತಮ್ಮೆಲ್ಲ ಹಡಗುಪಡೆಯನ್ನು ಯುರೋಪಕ್ಕೆ ತರಿಸಿಕೊಂಡು ಜರ್ಮನಿಯ ಮೇಲೆ ಬೀಳಲು ಅನುಕೂಲವಾಯಿತು. ಈ ಕಾಲಕ್ಕೆ ಇಂಡಿಯಾದ ಸಿಪಾಯಿಗಳು ಸಿಂಗಾಪುರದಲ್ಲಿ ಇಂಗ್ಲಿಷ ಅಧಿಕಾರಿಗಳ ಮೇಲೆ ಹಲ್ಲೆಯನ್ನು ಮಾಡಲು, ಜಪಾನಿಯರು ನಮ್ಮ ಸಿಪಾಯಿಗಳನ್ನು ಸದೆಬಡಿದು ಸಿಂಗಾಪುರವನ್ನು ತೊಂದರೆಗಳಿಂದ ಮುಕ್ತಗೊಳಿಸಿದರು. ಇದಲ್ಲದೆ ಜರ್ಮನಿಯ ಎಮ್‌ಡನ್ ಹಡಗುಗಳು ಹಿಂದೂ ಮಹಾಸಾಗರದಲ್ಲಿ ಇಂಗ್ಲಿಷರಿಗೆ ತೊಂದರೆಪಡಿಸಿದಾಗ ಜಪಾನಿಯರು ಇಂಗ್ಲಿಷರ ಸಹಾಯಕ್ಕೆ ಬಂದು ಜರ್ಮನಿಯ ಉಪಟಳವನ್ನು ತಪ್ಪಿಸಿದರು.

ಜಪಾನಿಯರು ಯುದ್ಧದ ಕಾಲದಲ್ಲಿ ಇಷ್ಟೆಲ್ಲ ಸಹಾಯವನ್ನು ಇಂಗ್ಲಿಷರಿಗೆ ಒದಗಿಸಿದ್ದರೂ 'ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ' ಎಂಬ ಗಾದೆಯಂತೆ ಯುದ್ಧವು ಮುಗಿದ ಮೇಲೆ ಜಪಾನಿಯರಿಗೆ ಏಶಿಯಾ ಖಂಡದಲ್ಲಿ ವ್ಯಾಪಾರದ ಅನುಕೂಲತೆಗಳನ್ನು ಒದಗಿಸಿಕೊಡುವದರ ಬದಲಾಗಿ, ಒಪ್ಪಂದವನ್ನು ಮುರಿದು, ಅಮೇರಿಕೆಯವರ ಸ್ನೇಹವನ್ನು ಕೋರಲಾರಂಭಿಸಿ, ಸಿಂಗಾಪುರವನ್ನು ಬಹು ಭದ್ರಪಡಿಸಲು ತೊಡಗಿದರು.

ಇಂಗ್ಲಂಡ, ಫ್ರಾನ್ಸ, ರಶಿಯಾದವರು ಮಹಾಯುದ್ಧದಲ್ಲಿ ಮಗ್ನರಾದಾಗ ಚೀನಾದೇಶದ ರಾಜಕೀಯ ಮುಖಂಡನಾಗಿದ್ದ ದಿವಂಗತ ಸನ್-ಯಾತ ಸೇನನು ಜಪಾನಿಯರಿಗೆ ಇಂಗ್ಲಿಷರ ಪಕ್ಷವನ್ನು ಬಿಟ್ಟು, ಜರ್ಮನ್ ಪಕ್ಷವನ್ನು ವಹಿಸಿ, ಇಂಗ್ಲಿಷರ ಸ್ವಾಧೀನವಾದ ಏಶಿಯಾಖಂಡದ ರಾಜ್ಯಗಳನ್ನು ಮುತ್ತುವಂತೆ ಪ್ರೇರೇಪಿಸಿದನು. ಜಪಾನಿಯರು ಈ ಸಲಹೆಯಂತೆ ವರ್ತಿಸಿದ್ದರೆ, ಇಂಗ್ಲಿಷರು ಎರಡೂ ಕಡೆಗಳಲ್ಲಿ ಯುದ್ಧಮಾಡಲು ಶಕ್ತಿ ಸಾಲದೆ ಪರಾಜಿತರಾಗಬಹುದಾಗಿತ್ತು. ಆದರೆ ಜಪಾನು ಸ್ನೇಹಭಾವನೆಗೆ ಮನ್ನಣೆಯಿತ್ತು ಸನ್‌ಯಾತ್‌ಸೇನನ ಸಲಹೆಯನ್ನು ತಿರಸ್ಕರಿಸಿದ್ದರಿಂದ ಚಾಣಕ್ಯತಂತ್ರಿಗಳಾದ ಬ್ರಿಟಿಶರು ಯಾವ ವಿಧದಿಂದಲೂ ಜಪಾನಿಯರಿಗೆ ವ್ಯಾಪಾರದ ಅನುಕೂಲತೆಗಳನ್ನೂ, ಇನ್ನಿತರ ಯಾವ ನೆರವನ್ನೂ ಕೊಡಲಿಲ್ಲ. ನಂಬಿದವರಿಗೆ ಇಂಬಿಲ್ಲದಂತೆ ಮಾಡುವ ಕುಶಾಗ್ರಬುದ್ಧಿಯಲ್ಲಿ ಬ್ರಿಟಿಶರನ್ನು ಮಿಕ್ಕಿಸುವವರು ಜಗತ್ತಿನಲ್ಲಾರೂ ಇಲ್ಲವೆಂದು ಒಡೆದು ಕಾಣುವಂತಿದೆ.

೧೮೭೭ರಲ್ಲಿ ಜಪಾನವು ತನ್ನ ಆಯಾತ ನಿರ್ಯಾತ ವ್ಯಾಪಾರದಲ್ಲಿ ೧೦೦ಕ್ಕೆ ೧ರಂತೆ (೫,೧೩,೦೦೦ ಎನ್ನುಗಳು) ಮಾತ್ರ ಇಂಡಿಯಾದೊಡನೆ ವ್ಯಾಪಾರವನ್ನು ಮಾಡಿತು. ಆದರೆ ಟಾಟಾರವರ ಪರಿಶ್ರಮದಿಂದ ೧೮೯೭ರಲ್ಲಿ ಜಪಾನವು ಭಾರತದಿಂದ ೩ ಕೋಟಿ ಎನ್ನುಗಳ ಸಾಮಾನುಗಳನ್ನು ಕೊಂಡಿತಲ್ಲದೆ ೫೦ ಲಕ್ಷ ಎನ್ನುಗಳ ಸಾಮಾನವನ್ನು ನಿರ್ಯಾತಗೊಳಿಸಿತು. ಜಪಾನವು ಪರದೇಶದ ವ್ಯಾಪಾರದಲ್ಲಿ ೧೦೦ಕ್ಕೆ ೧೨ರಂತೆ ಭಾರತದೊಡನೆ ಸಾಗಿಸಿತು; ನಿರ್ಯಾತವು ಹೆಚ್ಚಾದಂತೆ ಹಿಂದುಸ್ಥಾನದಿಂದ ಹೆಚ್ಚಿಗೆ ಆಯಾತವನ್ನು ಬರಮಾಡಿಕೊಂಡಿತು. ೧೯೨೦ರಲ್ಲಿ ಜಪಾನದಿಂದ ಇಂಡಿಯಾಕ್ಕೆ

೧೯ ಕೋಟಿ ಎನ್ನುಗಳ ಮಾಲು ರವಾನಿಸಲ್ಪಟ್ಟದ್ದಲ್ಲದೆ ಇಂಡಿಯಾದಿಂದ ೪೦ ಕೋಟಿ ಎನ್ನುಗಳ ಪದಾರ್ಥಗಳನ್ನು ತರಿಸಿಕೊಂಡಿತು. ಇದರಿಂದ ಬ್ರಿಟಿಶರ ಕಣ್ಣು ಕೆಂಪಗಾಗಿ ೧೯೨೭ರಲ್ಲಿ ಹಿಂದುಸ್ತಾನ ಸರಕಾರವು ಜಪಾನದ ಹತ್ತಿಯ ಸೂಲಿನ ಮೇಲೆ ಹೆಚ್ಚು ಸುಂಕವನ್ನು ಹೇರಿತಲ್ಲದೆ ೧೯೩೨ರಲ್ಲಿ ಹತ್ತಿಬಟ್ಟೆಯ ಮೇಲೂ ಒಂದು ಪೌಂಡಿಗೆ ೫ ಆಣೆಗಳಂತೆ ಸುಂಕವನ್ನು ಹೆಚ್ಚಿಸಿತು. ಜಪಾನವು ಇಷ್ಟು ಸುಂಕವನ್ನು ತೆತ್ತು, ವಿಪುಲವಾಗಿ ಸಾಮಾನು ಕಳಿಸಿ, ಅಗ್ಗವಾದ ದರದಿಂದ ಮಾರುವ ಸಾಹಸವನ್ನು ಮಾಡು ತ್ತಲೇ ಇದೆ. ಇಂಡಿಯಾ ಸರಕಾರವು ೧೯೩೨ರಲ್ಲಿ ವಿಧಿಸಿದ ೫೦ರಂತಿನ ಸುಂಕಕ್ಕೆ ಸಂತುಷ್ಟರಾಗದೆ ಬ್ರಿಟಿಶ್ ಸರಕಾರದ ಸಲಹೆಯ ಮೇರೆಗೆ ಜಪಾನಿನ ಸರಕಿನ ಮೇಲೆ ೧೦೦ಕ್ಕೆ ೭೫ರಂತೆ ಹೆಚ್ಚಿಸಿತು. ಆದರಿಂದ ಜಪಾನವು ರೊಚ್ಚಿಗೆದ್ದು ಲಂಡನದಲ್ಲಿರುವ ತನ್ನ ರಾಯಭಾರಿಗೆ ಈ ವಿಷಯವಾಗಿ ಆಕ್ಷೇಪಿಸಲು ಆಜ್ಞೆಮಾಡಿದ್ದಲ್ಲದೆ ಹಿಂದುಸ್ತಾನದ ಹತ್ತಿಯನ್ನು ಬಹಿಷ್ಕರಿಸುವಂತೆ ಪ್ರಕಟಿಸಿತು. ಇದರ ಪರಿಣಾಮವಾಗಿ ೧೯೩೪ರಲ್ಲಿ ಇಂಡಿಯಾ ಸರಕಾರವು ಜಪಾನಿನೊಡನೆ ಒಪ್ಪಂದ ಮಾಡಿಕೊಂಡು, ಜಪಾನವು ವರ್ಷಕ್ಕೆ ೧೦ ಲಕ್ಷ ಬೇಲು ಹತ್ತಿಯನ್ನು ಕೊಳ್ಳಬೇಕೆಂತಲೂ, ಇಂಡಿಯಾಕ್ಕೆ ೩೫ ಕೋಟಿ ಗಜ ಬಟ್ಟೆಯನ್ನು ಕೊಡಬೇಕೆಂತಲೂ, ಜಪಾನಿನ ಮೇಲೆ ಹೇರಿದ ೭೫ರ ಸುಂಕವನ್ನು ೫೦ ಮಾಡಬೇಕೆಂತಲೂ ಕರಾರುಗಳಾದವು. ಇಷ್ಟಾದ ಮೇಲೆಯೂ ಜಪಾನಿನ ಬಟ್ಟೆಯು ಲ್ಯಾಂಕಾಶಯರಿನ ಬಟ್ಟೆಯ ವ್ಯವಹಾರವನ್ನು ಹಿಂದೆ ಕೆಡವಿಬಿಟ್ಟಿತು.

೧೯೩೪ರಲ್ಲಾದ ಮೂರು ವರುಷದ ಕರಾರವು ೧೯೩೭ರ ಮಾರ್ಚ ತಿಂಗಳಕ್ಕೆ ಮುಗಿಯಲು ಮತ್ತೆ ಮೂರು ವರುಷಗಳ ಕರಾರುಗಳು ಸ್ವಲ್ಪು ಹೆಚ್ಚುಕಡಿಮೆಯಾಗಿ ಎರಡೂ ದೇಶಗಳ ನಡುವೆ ಗೊತ್ತಾದುವು. ಸದ್ಯಕ್ಕೆ ೧೬ ವರುಷದಿಂದ ವ್ಯಾಪಾರವು ಸುಸೂತ್ರವಾಗಿ ಸಾಗಿರುವದು. ಭಾರತದ ವರ್ತಕರಿಗೆ ಹೆಚ್ಚು ಅನುಕೂಲತೆ ಮಾಡಿಕೊಡಲು ಜಪಾನಿನ ಕೈಗಾರಿಕೆಯ ಕೇಂದ್ರವಾದ ಓಸಾಕಾ ನಗರದಲ್ಲಿ ಇಂಡಿಯಾ ಸರಕಾರದ ಕಚೇರಿಯೊಂದು ಸ್ಥಾಪಿತವಾಗಿದೆ. ಈ ಕಚೇರಿಯ ಅಧಿಕಾರಿಗಳಾದ ಶ್ರೀ. ಆರ್. ಆರ್. ಸಕ್ಸೆನಾರವರು ವ್ಯಾಪಾರಿಗಳೊಡನೆ ಪ್ರೇಮದಿಂದ ವರ್ತಿಸುತ್ತಿರುವದರಿಂದ

ವ್ಯವಹಾರವು ಯಾವ ತೊಂದರೆಯಿಲ್ಲದೆ ಸಾಗುತ್ತಲಿದೆ. ಇತ್ತೀಚೆಗೆ (೧೧-೧೨ ೫೮) ಶ್ರೀ. ಸಕ್ಸೆನಾರವರು ಇಂಡಿಯಾ ಸರಕಾರದ ಸಲಹೆಯಂತೆ ವಿದ್ಯಾಭ್ಯಾಸದ ಕೇಂದ್ರವಾದ ಟೋಕಿಯೋ ಮಹಾನಗರಕ್ಕೆ ಬಂದಾಗ ಈ ಗ್ರಂಥಕರ್ತನ ಸಹಾಯದಿಂದ ಅನೇಕ ಸಂಸ್ಥೆಗಳನ್ನು ಸಂದರ್ಶಿಸಿ, ಹಿಂದೂ ವಿದ್ಯಾರ್ಥಿಗಳು ಪಡೆಯುವ ಶಿಕ್ಷಣದ ವಿಷಯವಾಗಿಯೂ, ಅವರಿಗೆ ಜಪಾನು ಸರಕಾರವು ಒದಗಿಸಿರುವ ಅನುಕೂಲತೆಗಳ ಬಗ್ಗೆ ವರ್ತಮಾನ ಪತ್ರಿಕೆಗಳಲ್ಲಿ ಪ್ರಶಂಸೆಯೋದ್ಗಾರಗಳನ್ನು ಪ್ರಕಟಿಸಿದ್ದಾರೆ. ಅವರ ಗೌರ-ವಾರ್ಥವಾಗಿ ಔತಣವನ್ನೇರ್ಪಡಿಸಿದಾಗ, ಇಂಡಿಯಾ ಸರಕಾರದವರು ಕೈ-ಗಾರಿಕೆ, ವಾಣಿಜ್ಯಗಳ ಬಗ್ಗೆ ಅಭ್ಯಸಿಸಲು ಹೆಚ್ಚು ವಿದ್ಯಾರ್ಥಿಗಳಿಗೆ ಶಿಷ್ಯ ವೃತ್ತಿಯನ್ನು ಕೊಡುವಂತೆಯೂ, ಆ ವಿದ್ಯಾರ್ಥಿಗಳು ಮರಳಿದ ಮೇಲೆ ಅವರು ಕಲಿತು ಬಂದ ಉದ್ಯೋಗದ ಬೆಳೆವಣಿಗೆಗಾಗಿ ಸರಕಾರವು ತಕ್ಕ ಅನುಕೂಲತೆಯೊದಗಿಸಿಕೊಡುವಂತೆಯೂ ಶಿಫಾರಸುಮಾಡಬೇಕಾಗಿ ಅವರಿಗೆ ಬಿನ್ನವಿಸಿಕೊಳ್ಳಲಾಗಿದೆ.

೧೯೫೬ ರಲ್ಲಿ ಜಪಾನು ಇಂಡಿಯಾದಿಂದ ೫೬ ಕೋಟಿ ಎನ್ನು ಸಾಮಾನು ತರಿಸಿಕೊಂಡಿತಲ್ಲದೆ ೭೫ ಕೋಟಿ ಎನ್ನುಗಳ ಸರಕನ್ನು ಇಂಡಿಯಾಕ್ಕೆ ಕಳುಹಿಸಿತು. ಇಷ್ಟು ವ್ಯಾಪಾರವು ಜೋರಿನಿಂದ ಸಾಗಲು ನಮ್ಮ ವರ್ತಕರೆ ಕಾರಣರು. ಸದ್ಯಕ್ಕೆ ಜಪಾನಿನಲ್ಲಿ ಇಂಡಿಯಾ ವರ್ತಕರ ೨೫೦ ಸಂಸ್ಥೆಗಳಿದ್ದು ಅವುಗಳಲ್ಲಿ ೨೦೦, ಕೋಟೆ ರೇವು ಪಟ್ಟಣಗಳಲ್ಲಿ ನೆಲೆಸಿರುವವು. ಉಳಿದ ೫೦ ಸಂಸ್ಥೆಗಳು ಯಾಕೋಹಾಮಾದಲ್ಲಿ ನೆಲೆಸಿ ವ್ಯಾಪಾರವನ್ನು ಸಾಗಿಸಿರುವವು. ಈ ವರ್ತಕರಲ್ಲಿ ಬಹುಜನರು ಸಿಂಧ ಪ್ರಾಂತ್ಯದವರಿರುವರು; ಉಳಿದವರು ಗುಜರಾತಿನವರಿದ್ದಾರೆ. ಇವರಿಬ್ಬರ ಹೊರತಾಗಿ ಉಳಿದ ಪ್ರಾಂತದವರಿಗೆ ವ್ಯಾಪಾರದಲ್ಲಿ ಅಷ್ಟೊಂದು ಗತಿಯಿಲ್ಲವೆಂಬುದು ಸಿದ್ಧವಾದ ಮಾತಾಗಿದೆ. ಆಯಾ ದೇಶವಾಗಲಿ, ಪ್ರಾಂತವಾಗಲಿ ಆರ್ಥಿಕ ಅಭಿವೃದ್ಧಿಯನ್ನು ಪಡೆಯಲು ಕೈಗಾರಿಕೆ ಹಾಗೂ ವ್ಯಾಪಾರವೇ ಮುಖ್ಯ ಕಾರಣವೆಂದು ತಿಳಿದು ಅದಕ್ಕಾಗಿ ಪ್ರತಿಯೊಂದು ಪ್ರಾಂತೀಯರು ಹೆಣಗಲೇಬೇಕು. ಕಳೆದ ೬೦ ವರುಷಗಳಿಂದ ಇಂಡಿಯಾ ಜಪಾನಿನ ನಡುವೆ ಆದ ಆಯಾತ ನಿರ್ಯಾತ ವ್ಯಾಪಾರದ ಅಂಕಿಗಳನ್ನು ಕೆಳಗೆ ಕಾಣಿಸಲಾಗಿದೆ.

## ( ಒಂದುಸಾವಿರ ಎನ್ಸ್ನಗಳ ಪ್ರಮಾಣ )

| ವರುಷ | ಇಂಡಿಯಾದಿಂದ ಜಪಾನಿಗೆ. | ಜಪಾನಿನಿಂದ ಇಂಡಿಯಾಕ್ಕೆ | ಒಟ್ಟುವ್ಯಾಪಾರದ ಬೆಲೆ. |
|---|---|---|---|
| ೧೮೭೭ | ೧೯೧ | ೩೨೩ | ೫೧೪ |
| ೧೮೮೭ | ೫೭೯೨ | ೪೫೩ | ೫೪೭೫ |
| ೧೮೯೭ | ೨೯೭೭೫ | ೫೫೬೩ | ೩೫೩೩೮ |
| ೧೯೦೭ | ೭೪೫೯೩ | ೧೩೦೮೮ | ೮೭೬೯೧ |
| ೧೯೧೭ | ೨೨೩೯೪೧ | ೧೦೧೩೬೪ | ೩೨೫೩೦೫ |
| ೧೯೨೭ | ೨೭೦೫೯೨ | ೧೬೭೫೮೦ | ೪೩೮೧೭೨ |
| ೧೯೩೧ | ೧೩೩೧೬೫ | ೧೧೦೩೬೭ | ೩೦೯೬೬೭ |
| ೧೯೩೫ | ೩೦೫೬೪೬ | ೨೭೫೬೩೭ | ೫೮೧೭೮೪ |
| ೧೯೩೬ | ೩೭೨೦೦೪ | ೨೫೯೧೦೭ | ೬೩೧೧೧೬ |

## ಇಂಡಿಯಾದಿಂದ ಜಪಾನಿಗೆ ನಿರ್ಯಾತವಾಗುವ ಪದಾರ್ಥಗಳ ಬೆಲೆ

| ಪದಾರ್ಥಗಳು | ೧೯೩೪ | ೧೯೩೫ | ೧೯೩೬ |
|---|---|---|---|
| ಹತ್ತಿ . . . . . . | ೨೧೨೪೩೪೬೬೧ | ೨೫೯೦೩೬೮೬೨ | ೩೧೫೦೬೦೮೫೮ |
| ಶುದ್ಧ ಕಬ್ಬಿಣ . . . | ೭೨೯೨೩೯೭ | ೧೨೭೭೮೨೮೧ | ೧೪೫೬೯೭೨೪ |
| ಇತರ ಕಬ್ಬಿಣ . . . | ೪೭೬೧೧೯೧ | ೪೮೫೯೪೪೧ | ೭೫೬೮೩೪೫ |
| ಗಿಡಗಳ ದಾರ (fibers) | ೪೮೮೩೯೩೬ | ೪೬೫೪೮೭೨ | ೭೩೪೨೪೪೪ |
| ಧಾನ್ಯಗಳು . . . . | ೧೩೭೦೫೪೪ | ೨೨೯೨೮೩೦ | ೪೨೪೮೫೯೦ |
| ಅದರುಗಳು. . . . | ೨೩೫೫೬೨೩ | ೩೬೩೬೯೫೩ | ೪೧೮೩೯೭೪ |
| ಸೀಸ . . . . . | ೩೦೪೮೭೦೮ | ೪೬೩೪೫೯೨ | ೩೭೬೫೧೪೧ |
| ಚರ್ಮ . . . . . . | ೨೭೬೨೬೭೭ | ೨೫೧೮೬೨೨ | ೨೩೪೫೮೪೪ |
| ರಬ್ಬರ್. . . . . | ೪೭೮೮೨೫ | ೧೮೭೧೨೨ | ೧೫೯೭೭೦೬ |
| ಭತ್ತ, ಅಕ್ಕಿ . . . | ೩೨೭೬೦೩ | ೨೦೦೪೪೭ | ೬೫೫೮೪ |
| ಎಣ್ಣೆಯ ಕಾಳು . . | ೭೮೧೪೦ | ೮೧೭೦೮ | ೧೧೨೯೩೧೩ |
| ಹಸಿ ಚರ್ಮ . . . . | ೨೩೨೭೦೮ | ೪೬೨೩೯೮ | ೬೫೪೯೦೭ |
| ಟಿನ್ . . . . . | — | — | ೩೨೦೫೫ |
| ಇತರ ಪದಾರ್ಥಗಳು . | ೧೪೪೨೫೫೨೨ | ೧೦೩೪೯೧೩೧ | — |
| ಒಟ್ಟು.... | ೨೮೯೬೭೧೫೨೪ | ೩೦೫೬೪೬೨೫೯ | ೩೭೨೦೦೯೦೮೯ |

ಜಪಾನಿನಿಂದ ಇಂಡಿಯಾಕ್ಕೆ ಹತ್ತಿ, ರೇಶಿಮೆ, ಕೃತಕ ರೇಶಿಮೆ,ಉಣ್ಣೆ ಬಟ್ಟೆ, ಚಹಾದ ಎಲೆ, ಯಂತ್ರಗಳು, ಬೀರು, ಗೊಂಬೆಗಳೇ ಮೊದಲಾದ ೨೩ ಕೋಟಿ ಎನ್ನುಗಳ ಸಾಮಾನು ೧೯೩೬ರಲ್ಲಿ ರವಾನಿಸಲ್ಪಟ್ಟಿತು. ೬೦ ವರುಷಗಳ ಹಿಂದೆ ಆರಂಭವಾದ ವ್ಯಾಪಾರವು ಅವ್ಯಾಹತವಾಗಿ ನಡೆದಿದೆ. ಜಪಾನವೇ ಭಾರತದಿಂದ ಹೆಚ್ಚಾಗಿ ಸಾಮಾನುಗಳನ್ನು ಕೊಂಡುಕೊಳ್ಳುವದ ರಿಂದ ಪ್ರತ್ಯಕ್ಷ ಹಣವು ಭಾರತಕ್ಕೆ ದೊರೆಯುವದು. ಉದಾಹರಣೆಗಾಗಿ ಭಾರತವು ೩೦ ಕೋಟಿ ಎನ್ನುಗಳ ಪದಾರ್ಥಗಳನ್ನು ಜಪಾನಿಗೆ ಮಾರಿದರೆ, ಅಲ್ಲಿಂದ ೨೦ ಕೋಟಿ ಎನ್ನುಗಳ ಸಾಮಾನು ಇಂಡಿಯಾಕ್ಕೆ ಬರುತ್ತದಾದ್ದ ರಿಂದ ರೋಖು ೧೦ ಕೋಟಿ ಎನ್ನುಗಳು ಭಾರತಕ್ಕೆ ದೊರೆಯುತ್ತವೆ. ಹೀಗಾಗಿ ಜಪಾನಿನಿಂದ ಭಾರತಕ್ಕೆ ಆಗುವ ಲಾಭವೇ ಹೆಚ್ಚಾಗಿದ್ದು, ಆರ್ಥಿಕ ಸಂಪತ್ತು ಹೆಚ್ಚಲು ಕಾರಣವಾಗಿದೆ.

ಭಾರತದ ಹತ್ತಿಗೆ ಜಪಾನವೆ ಕಾಮಧೇನುವಾಗಿದೆ. ಇಲ್ಲಿಂದ ಹೊರಗೆ ಹೋಗುವ ಹತ್ತಿಯಲ್ಲಿ ೧೦೦ ಕ್ಕೆ ೮೭ ರಂತೆ ಜಪಾನಕ್ಕೆ ಹೋಗುತ್ತದೆ. ಅದರಂತೆ ಕೋಟ್ಯಾಂತರ ರೂಪಾಯಿಗಳ ಕಬ್ಬಿಣವನ್ನು ಜಪಾನವು ಇಂಡಿ ಯಾದಿಂದ ಕೊಂಡುಕೊಳ್ಳುತ್ತಲಿದೆ. ಒಟ್ಟಿನಲ್ಲಿ ಜಪಾನಿನ ಮಾರುವ ಬೆಲೆ ಕಡಮೆ, ಕೊಂಡುಕೊಳ್ಳುವ ಬೆಲೆ ಹೆಚ್ಚು. ಆದ್ದರಿಂದ ಭಾರತವು ಜಪಾನಿ ನೊಡನೆ ಒಳ್ಳೆರೀತಿಯ ವ್ಯಾಪಾರ ಸಂಬಂಧವನ್ನಿಟ್ಟುಕೊಂಡಿರುವುದು ಲೇಸು. ತಂತಮ್ಮ ಉದ್ಧಾರವಾಗಬೇಕಾದರೆ ತಾವು ಎಚ್ಚತ್ತು ದುಡಿದು ಮುಂದುವರಿಯಬೇಕಾಗುತ್ತದೆಂಬ ತತ್ವವನ್ನು ಮರೆಯದೆ, ವ್ಯವಹಾರದ ಲಾಭದಾಯಕ ಹಾದಿಯನ್ನು ಬಿಡದೆ ವರ್ತಿಸುತ್ತಿರುವುದೇ ದೇಶಾಭ್ಯುದ ಯಕ್ಕೆ ಮೂಲಭೂತ ಕಾರಣವಾಗಿರುತ್ತದೆ.

---

# ವ್ಯವಸಾಯವು



ಸರ್ವಾಧಿಕಾರಿಯ ಕಾಲದಲ್ಲಿ ರೈತರು ಯಾವ ಯಾವ ಬೆಳೆಯನ್ನು ಬೆಳೆಯಿಸಬೇಕೆಂಬದನ್ನು ಅಧಿಕಾರಿಗಳೇ ನಿರ್ಧರಿಸುತ್ತಿದ್ದರು; ಆದರೂ ಅಧಿಕಾರಿಗಳಿಗೆ ಸಂಬಂಧಪಟ್ಟ ರೈತರು ಮಾತ್ರ ಕಬ್ಬು ಮತ್ತು ಬೇರೆ ತರದ ಬೆಲೆ ಬರುವ ಬೆಳೆಗಳನ್ನು ತೆಗೆದುಕೊಳ್ಳದೆ ಬಿಡುತ್ತಿದ್ದಿಲ್ಲ. ಉಳಿದವರು ಮಾತ್ರ ಕೇವಲ ಬತ್ತದ ಬೆಳೆಯಲ್ಲಿ ತೊಡಗಿರುತ್ತಿದ್ದರು. ಹೊಲವನ್ನು ಮಾರುವದಕ್ಕೆ, ಬತ್ತವನ್ನು ಪರದೇಶಗಳಿಗೆ ಕಳಿಸುವದಕ್ಕೆ ಸರಕಾರವು ನಿರ್ಬಂಧಗೊಳಿಸಿತ್ತು. ಇಡಿ ಜಪಾನವು ಒಕ್ಕಲತನದ ದೇಶವಾಗಿ ಪರಿಣಮಿಸಿದ್ದರಿಂದ ಬಹಳಷ್ಟು ಜನರು ಅದರಿಂದಲೇ ಉಪಜೀವಿಸುತ್ತಿದ್ದರು. ೧೮೬೮ರಲ್ಲಿ ಮೇಜಿ ಚಕ್ರವರ್ತಿಗಳು ಪಟ್ಟವೇರಿದ ಮೇಲೆ ಬೇಕಾದವರು ಬೇಕಾದ ಬೆಳೆಯನ್ನು ಬೆಳೆಯಬಹುದೆಂದು ಅಪ್ಪಣೆಯನ್ನಿತ್ತದ್ದಲ್ಲದೆ, ಸರಕಾರದ ವಶದಲ್ಲಿದ್ದ ಎಲ್ಲ ಬತ್ತವನ್ನು ಪರದೇಶಗಳಿಗೆ ಹೊತ್ತುಹಾಕಿದರು. ಅದರಿಂದ ಸರಕಾರಕ್ಕೆ ೫ ಲಕ್ಷ ಎನ್ನುಗಳ ಲಾಭವಾಯಿತು.

ಇಂದಿನ ಬೇಸಾಯದಲ್ಲಿ ಬತ್ತ, ಆಲುಗಡ್ಡೆ, ಗೋದಿ, ರೇಶಿಮೆ ಹುಳಗಳಸಾಕುವಿಕೆ ಮೊದಲಾದವು ಮುಖ್ಯವಾಗಿವೆ. ಅಕ್ಕಿಯೇ ಇಲ್ಲಿಯ ಮುಖ್ಯಾಹಾರವು. ಈ ದೇಶವು ಚಿಕ್ಕದಿರುವದರಿಂದ ಒಕ್ಕಲತನಕ್ಕೆ ಸಾಕಷ್ಟು ಭೂಮಿಯು ದೊರೆಯುವದಿಲ್ಲ. ಇದರೊಂದಿಗೆ ವಾಯುಗುಣದ ಅಸಹಕಾರವೂ ಇದೆ. ಈ ದೇಶದ ವಿಸ್ತೀರ್ಣವು ೩,೯೧,೧೪,೮೫೮ ಚೊಬು. (೧ ಚೊಬು=೨ ೪/೫ ಎಕರೆ) ಇದರಲ್ಲಿ ನೂರಕ್ಕೆ ೧೫ರಂತೆ ಮಾತ್ರ ಬೇಸಾಯಕ್ಕೆ ತಕ್ಕುದಾಗಿದೆ. ಇಲ್ಲಿಯ ಹಳ್ಳಿಗಳ ಜನತೆಯನ್ನು (೧) ಬಡರೈತರು, (೨) ಮಧ್ಯಮ ತರಗತಿಯ ರೈತರು, (೩) ಸಣ್ಣಪುಟ್ಟ ಜಮೀನುದಾರರು ಹೀಗೆ ಮೂರು ವಿಧವಾಗಿ ವಿಂಗಡಿಸಬಹುದು. ಸ್ವಂತ ಹೊಲಗಳಿಲ್ಲದವರು,

ಅರ್ಧ ಚೊಬು ಜಮೀನುಳ್ಳವರು ಬಡರೈತರ ಗುಂಪಿಗೆ ಸೇರಿದವರು. ೧೦೦ಕ್ಕೆ ೩೯ರಂತೆ ಮನೆತನಗಳು ಮಾತ್ರ ಅರ್ಧ ಚೊಬು ಹೊಲವುಳ್ಳವರಿರುವರು. ಒಟ್ಟು ವ್ಯವಸಾಯ ಕ್ಷೇತ್ರದಲ್ಲಿ ನೂರಕ್ಕೆ ೮.೯ ಭಾಗವು ಮಾತ್ರ ಇಂಥವರ ಸ್ವಾಧೀನದಲ್ಲಿರುವದರಿಂದ ಇವರ ಆರ್ಥಿಕ ಸ್ಥಿತಿಯು ಎಷ್ಟು ಹೀನಾಯವಾಗಿರುತ್ತದೆಂಬದು ವ್ಯಕ್ತವಾಗುವದು. ೧½ ಚೊಬಿನಿಂದ ೩ರ ವರೆಗೆ ಹೊಲವಿದ್ದವರು ಮಧ್ಯಮ ತರಗತಿಯವರು. ಇವರ ಮನೆತನಗಳು ನೂರಕ್ಕೆ ೩೩ರಂತಿದ್ದು, ಒಟ್ಟು ವ್ಯವಸಾಯದಲ್ಲಿ ನೂರಕ್ಕೆ ೪೦.೮ ರಂತೆ ಭೂಮಿಯುಳ್ಳವರಾಗಿದ್ದಾರೆ. ಇವರೇ ದೇಶದ ಬೆನ್ನೆಲಬಾಗಿ ದುಡಿಯುತ್ತಿದ್ದಾರೆ. ೩ ಚೊಬುಗಳಿಂದ ೧೦ ಚೊಬುಳ್ಳವರು ಪುಟ್ಟ ಜಮೀನದಾರರು. ಇವರ ಸ್ಥಿತಿಯಾದರೂ ಮಧ್ಯಮ ತರಗತಿಯವರಿಗಿಂತ ಕೊಂಚ ಒಳಿತೆನ್ನಬಹುದು. ೧೦ ಚೊಬುಗಳಿಗಿಂತ ಹೆಚ್ಚುಳ್ಳವರು ದೊಡ್ಡ ಜಮೀನದಾರರು. ಇವರು ನೂರಕ್ಕೆ ೧ರಂತಿದ್ದರೂ ಒಟ್ಟು ವ್ಯವಸಾಯದಲ್ಲಿ ನೂರಕ್ಕೆ ೨೪ರ ಭಾಗವುಳ್ಳವರಾಗಿದ್ದಾರೆ. ರೈತರಿಗೆ ಸಾಕಾದಷ್ಟು ಬೆಳೆಯು ಕೈಗೆ ಬಂದರೂ ಕಂದಾಯ, ಬಡ್ಡಿ ಮೊದಲಾದವುಗಳನ್ನು ತೆರುವುದರಲ್ಲಿ ಸುದಾಮರಾಗುತ್ತಾರೆ. ಈ ಆರ್ಥಿಕ ದುಸ್ಥಿತಿಯ ದೆಶೆಯಿಂದ ರೈತ ಜನರು ಗುತ್ತಿಗೆಯ ಸಾಗುವಳಿಯನ್ನು ಮಾಡಲು ಹಾತೊರೆಯುತ್ತಾರೆ. ಹಾಗಾದರೂ ಕೂಡ ಯಜಮಾನನಿಗೆ ನೂರಕ್ಕೆ ೩೦ರಂತೆ ತೆತ್ತಬೇಕಾಗುವದು. ಸರಕಾರವು ಲಾವಣಿದಾರ ರೈತರಿಗೆ ಸಾಕಷ್ಟು ಬಂಡವಾಳವನ್ನು ಕೊಟ್ಟು, ಸ್ವಂತ ಜಮೀನು ಸಾಗಿಸಿ ಉಪಜೀವಿಸಲು ಬರುವಂತೆ ಸಹಾಯವನ್ನು ಮಾಡುತ್ತಲಿದೆ. ಸದ್ಯಕ್ಕಂತೂ ಇಲ್ಲಿಯ ಬೇಸಾಯದ ಸ್ಥಿತಿಯು ತೀರ ಶೋಚನೀಯವಾಗಿದೆ. ಬೇರೆ ರಾಷ್ಟ್ರಗಳಂತೆ ಜಪಾನವು ಕೂಡ ರೈತರ ಗೋಳಿನಿಂದ ಹೊರತಾಗಿರುವದಿಲ್ಲ. ಸಾಗುವಳಿಯ ಕ್ಷೇತ್ರವು ೨½ ಎಕರೆಯಿರುವದರಿಂದ ನವನಾಗರಿಕತೆಯ ಯಾಂತ್ರಿಕ ಸುಧಾರಣೆಗಳಿಂದ ನಡೆಯಿಸಲು ಅಸಾಧ್ಯವಾದ ಮಾತಾಗಿದೆ. ಆದರೂ ವ್ಯವಸಾಯದಿಂದ ಬಂದ ಕಂದಾಯವನ್ನು ಕೈಗಾರಿಕೆಯ ಉನ್ನತಿಗಾಗಿ ವೆಚ್ಚ ಮಾಡಿದ್ದರಿಂದಲೇ ಇಂದು ಜಪಾನವು ಕೈಗಾರಿಕೆಯ ತವರೂರಾಗಿ ಪರಿಣಮಿಸಿದೆ. ಕೈಗಾರಿಕೆಯು ಕಲ್ಪನಾತೀತವಾಗಿ ಬೆಳೆದಿದ್ದರೂ, ರೈತರೇ ಹೆಚ್ಚು ಕಂದಾಯವನ್ನು ಸರಕಾರಕ್ಕೆ ಸಲ್ಲಿಸು

ತ್ತಿದ್ದಾರೆಂಬ ಮಾತನ್ನು ಮರೆಯುವಂತಿಲ್ಲ. ಕೈಗಾರಿಕೆಯು ರೈತರನ್ನು ಹಣ್ಣುಗಾಯಿ ನೀರುಗಾಯಿ ಮಾಡಿಬಿಟ್ಟಿದೆ. ಬೇಸಾಯದ ಕೂಡ ಸಣ್ಣ ಪುಟ್ಟ ಕೈಗಾರಿಕೆಗಳನ್ನು ರೈತರು ಪೂರ್ವಕಾಲದಿಂದಲೂ ಮಾಡುತ್ತಲೇ ಬಂದಿರುವರು. ಇಂದಿನ ಸುಧಾರಣೆಯ ಕಾಲದಲ್ಲಿ ಮನೆಮನೆಗಳಲ್ಲಿಯೇ ತಯಾರಾಗುವ ಉದ್ಯಮವು ನಿಂತುಹೋಗಿ ಕಾರಖಾನೆಗಳ ಪಾಲಾಗಿಬಿಟ್ಟಿತು. ೧೯೨೯ರಲ್ಲುಂಟಾದ ಆರ್ಥಿಕ ಮುಗ್ಗಟ್ಟಿನಿಂದ ಇವರ ೩೧೮ ಕೋಟಿ ಎನ್ನುಗಳ ಪದಾರ್ಥಗಳ ದರವು ೧೯೩೦ರ ವೇಳೆಗೆ ೨೭೦ ಕೋಟಿಗಿಳಿಯಿತು. ೧೯೩೭ರಲ್ಲಿ ಒಟ್ಟು ಪದಾರ್ಥಗಳ ಬೆಲೆಯು ೧೮೦ ಕೋಟಿಗೆ ಇಳಿದುಬಿಟ್ಟಿತು. ೧ ತೋಕು (ಹೆಚ್ಚು ಕಡಿಮೆ ೧ ಪಲ್ಲಾ) ಬತ್ತಕ್ಕೆ -.೨ ಎನ್ನುಗಳಂತಿದ್ದ ದರವು ೧೯೩೧ರಲ್ಲಿ ೧೬ ಎನ್ನಾಯಿತು. ಬತ್ತವೇ ಮುಖ್ಯಾಹಾರವಾಗಿದ್ದರಿಂದ ಧಾರಣೆಯ ಏರಿಳಿತದ ಮೂಲಕ ರೈತರು ಹೌಹಾರಿದರು. ಆದಾಯವೇ ಕಡಿಮೆಯಾಗಲಾಗಿ ಕಂದಾಯವು ಕಟ್ಟಾಗುವ ಹೊತ್ತು ಬಂದುದರಿಂದ ಸರಕಾರದವರು ಒಂದು ಸಮಿತಿಯನ್ನು ನಿಯಮಿಸಿದರು. ಅದರ ಸಲಹೆಯಂತೆ ಸರಕಾರವೆ ೨೩ ಎನ್ನುಗಳಿಗೊಂದು ತೋಕು ಬತ್ತವನ್ನು ಕೊಂಡುಕೊಳ್ಳತೊಡಗಿತು. ಇಷ್ಟೇ ಧಾರಣೆಯಿರಬೇಕೆಂಬ ಆಜ್ಞೆಯನ್ನು ಮಾಡಿತು. ಅದರಿಂದ ರೈತರಲ್ಲಿ ಜೀವಕಳೆದುಂಬಿ ಕೆಲಕಾಲ ಉಪಜೀವಿಸಲನುವಾಯಿತು. ಹೀಗೆ ಮಾಡುವದರಿಂದ ಸರಕಾರಕ್ಕೆ ಹಾನಿಯಾಯಿತು; ಆಗುತ್ತಲೂ ಇದೆ. ಆದರೆ ರೈತರು ಬದುಕಿದರೆಂಬ ಲಾಭವೇನು ಕಡಮೆಯದಾಗಲಿಲ್ಲ. ಏರು ಧಾರಣೆಯಿಂದ ಕೊಂಡ ಬತ್ತವು ಸರಕಾರದ ಕಣಜಗಳಲ್ಲಿ ತುಂಬಿತು. ಎಷ್ಟಕ್ಕಾದರೂ ಮಾರಾಟವಾದರೆ ಸಾಕೆಂದು ಕೈಗೆ ಬಂದಂತೆ ಕೊಡತೊಡಗಿದರು. ಸರಕಾರವು ತನ್ನವರ ಸಲುವಾಗಿ ಮಾಡುವ ಇಂಥ ವ್ಯವಹಾರವು ಎಂದಿಗಾದರೂ ಪ್ರಶಂಸನೀಯವಾದುದಲ್ಲದೆ ಮತ್ತೇನು?

ಜಪಾನಿನಲ್ಲಿ ೫೭ ಜನರಿದ್ದ ಒಂದು ಮನೆತನಕ್ಕೆ ೩೮೮ ಎನ್ನು ಆದಾಯ ಏದೆ. ಸಾಲವು ೮೩೭ ಎನ್ನು. ಪೂರ್ವಕಾಲದಲ್ಲಿ ರೈತನು ತನಗೆ ಬೇಕಾದವುಗಳನ್ನು ಆದಷ್ಟುಮಟ್ಟಿಗೆ ತಾನೇ ತಯಾರಿಸಿಕೊಂಡು ತೀರ ತುಸು ಹಣವನ್ನು ಕೊಂಡುಕೊಳ್ಳಲು ಉಪಯೋಗಿಸುತ್ತಿದ್ದನು. ಆದರೆ ಪರಿಸ್ಥಿತಿಯ ಬದಲಾವಣೆಯಿಂದ ಎಲ್ಲಕ್ಕೂ ಹಣವಿಲ್ಲದೆ ಗತ್ಯಂತರವಿಲ್ಲದಾಗಿದೆ. ರೈತರ

ಸ್ಥಿತಿಯು ಸುಧಾರಿಸಬೇಕಾದರೆ ಮಾತ್ರ, ಸಾಗುವಳಿಯ ಕ್ಷೇತ್ರವು ಹೆಚ್ಚಾಗ ಬೇಕು. ಹೆಚ್ಚು ಜನರು ಈ ವ್ಯವಸಾಯವನ್ನು ಕೈಕೊಳ್ಳಬೇಕು. ಅಂದರೆ ಮಾತ್ರ ರೈತನು ಸುಖದಿಂದ ಕಾಲಕಳೆಯಲು ಅವಕಾಶವುಂಟಾಗುತ್ತದಲ್ಲದೆ ಬೇರಿನ್ನಾವುದರಿಂದಾಗಲು ಸಾಧ್ಯವೇ ಇಲ್ಲ.

ಮುಖ್ಯ ವ್ಯವಸಾಯ—ಬತ್ತದ ಜೊತೆಗೆ, ಚಹಾದ ಎಲೆ ಬೆಳೆಯಿಸುವದು, ರೇಶಿಮೆ ಹುಳಗಳನ್ನು ಸಾಕುವದು ಜಪಾನಿನ ನಿತ್ಯಜೀವನವಾಗಿದೆ. ಚಹವು ಜಪಾನಿನಲ್ಲಿ ಎಲ್ಲ ಕಡೆಗೂ ಬೆಳೆಯುವದಲ್ಲದೆ, ಫಿಜೂಕಾ ಪ್ರಾಂತ್ಯದಲ್ಲಿ ಹುಟ್ಟುವಳಿಯ ಅರ್ಧದಷ್ಟು ಬೆಳೆಯುತ್ತದೆ. ೧೯೩೫ರಲ್ಲಿ ೨ ಕೋಟಿ ಎನ್ನು ಬೆಲೆಯಾಗುವಷ್ಟು ಚಹವು ಬೆಳೆಯಿತು. ಅಮೇರಿಕವು ಒಟ್ಟಿನಲ್ಲಿಯ ೬೦ ರ ಭಾಗದಷ್ಟು ಚಹವನ್ನು ಕೊಂಡುಕೊಳ್ಳುತ್ತಲಿದೆ. ಇದರಂತೆಯೇ ರಶಿಯಾ, ಕಾನಡಾ ದೇಶಗಳು ಇದಕ್ಕೆ ಒಳ್ಳೆ ಗಿರಾಕಿಗಳಿರುತ್ತವೆ.

ಜಪಾನಿನ ಕೈಗಾರಿಗೆ ರೇಶಿಮೆಯು ಕೈಗಾರಿಕೆಯು ಮುಖ್ಯಾಧಾರ ವಾಗಿದೆ. ಇದು ಜಪಾನಿಯರ ಜನ್ಮಸಿದ್ಧ ಹಕ್ಕು ಆಗಿದೆಯೆಂದರೂ ತಪ್ಪಾಗ ಲಾರದು. ಜಗತ್ತಿನಲ್ಲಿಯೇ ಉತ್ಪತ್ತಿಯಾಗುವ ರೇಶಿಮೆಯಲ್ಲಿ ೮೦ ರಷ್ಟು ಭಾಗವು ಜಪಾನಿನಲ್ಲಿ ಹುಟ್ಟುತ್ತದೆ. ಅಮೇರಿಕಾ, ಯುರೋಪದೇಶಗಳ ರೇಶಿಮೆಯ ಕೈಗಾರಿಕೆಯು ಜೀವಿಸಿಕೊಂಡಿರುವುದು ಜಪಾನಿಯರ ರೇಶಿಮೆ ಯಿಂದಲೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ಹುಳು ಸಾಕುವಿಕೆಯು ಜಪಾನಿಯರಿಗೆ ೨೦೦೦ ವರುಷಗಳ ಹಿಂದಿನಿಂದಲೂ ಗೊತ್ತಿ ರುವುದು. ಈ ಗುಟ್ಟು ಚೀನಾ, ಕೋರಿಯಾ ದೇಶಗಳಿಂದ ಇಲ್ಲಿಗೆ ಬಂದಿ ತೆಂಬ ಮಾತೂ ಅಲ್ಲಲ್ಲಿ ರೂಢವಾಗಿದೆ. ಇಲ್ಲಿಯ ಕೈಗಾರಿಕೆಗಳು ಬೌದ್ಧ ಧರ್ಮವು ಪ್ರವೇಶಿಸಿದ ಮೇಲೆಯೇ ಪ್ರಗತಿಯನ್ನು ಪಡೆದವು. ಅಲ್ಲಿಂದೀ ಚೆಗೆ ಜಪಾನಿಯನ ಉಡುಪು ರೇಶಿಮೆಯದಾಗಿತ್ತೇ ಹೊರತಾಗಿ ಹತ್ತಿಯ ದಾಗಿರಲಿಲ್ಲ. ೧೮೬೮ ರಿಂದ ಜಪಾನವು ಪರದೇಶಗಳೊಡನೆ ವ್ಯಾಪಾರವನ್ನು ಮಾಡಲು ನಿಶ್ಚಯಿಸಿದಾಗ ಮಾರಬಹುದಾದ ಪದಾರ್ಥವೆಂದರೆ ರೇಶಿಮೆ ಯಲ್ಲದೆ ಬೇರಾವ ವಸ್ತುಗಳಿರಲಿಲ್ಲ. ರೇಶಿಮೆ ಮಾರಿ, ಬಂದ ಹಣದಿಂದಲೇ ಜಗತ್ತಿನಲ್ಲಿಯ ಎಲ್ಲ ಪದಾರ್ಥಗಳನ್ನು ಪಡೆಯಲನುಕೂಲವಾಯಿತು. ಅದು

ದರಿಂದ ಸರಕಾರವು ಈ ಉದ್ಯಮಕ್ಕೆ ಬೇಕಾದಷ್ಟು ಸಹಾಯಮಾಡಿತಲ್ಲದೆ ಇದಕ್ಕಾಗಿಯೇ ಕೆಲವು ಸಹಕಾರ ಸಂಘಗಳನ್ನು ಸ್ಥಾಪಿಸಿತು; ಈ ಕೈಗಾರಿಕೆಯ ಶಾಲೆಗಳನ್ನು ಪ್ರತಿ ಜಿಲ್ಹೆಯಲ್ಲಿಯುಂಟಾದವು; ಟೋಕಿಯೋದಲ್ಲಿ ಕೇಂದ್ರ ಸಂಘವನ್ನು ಸ್ಥಾಪಿಸಿ ಶಾಲೆಗಳಿಗೂ, ವ್ಯಾಪಾರಸ್ಥರಿಗೂ ಅನುಕೂಲತೆಗಳನ್ನು ಒದಗಿಸಿದ್ದಾರೆ. ಇದರ ನಿಯಂತ್ರಣೆಗಾಗಿ ಸರಕಾರವು ಅನೇಕ ಕಟ್ಟಳೆಗಳನ್ನು ಮಾಡಿದ್ದಲ್ಲದೆ ೧೯೩೫ ರಿಂದ ಪ್ರತಿವರುಷವೂ ರೇಶಿಮೆಯ ಹುಟ್ಟುವಳಿಗಾಗಿ ಸರಕಾರವು ೧ ಕೋಟಿ ಎನ್ನುಗಳನ್ನು ವೆಚ್ಚ ಮಾಡುತ್ತಲಿದೆ.

ಸಹಕಾರ ಸಂಘಗಳು ರೇಶಿಮೆ ಹುಟ್ಟುವಳಿಗೂ ಮಾರಾಟಕ್ಕೂ ಬಹಳೇ ಸಹಾಯಕಾರಿಯಾಗಿವೆ. ೧೯೩೫ ರಲ್ಲಿ ಈ ಸಹಕಾರಿ ಸಂಘಗಳಿಗೆ ೬೦ ಲಕ್ಷ ಸದಸ್ಯರಿದ್ದರು. ಅದೇ ವರುಷದ ಮಾರಾಟದಿಂದ ಸಂಘಗಳಿಗೆ ೨೯೨೮೧೯೭೫ ಎನ್ನುಗಳ ಲಾಭವಾಯಿತು. ಇಷ್ಟು ಲಾಭವು ದೊರೆತಾಗ್ಯೂ ಸಂಘಗಳು ಸದಸ್ಯರ ಹಿತವನ್ನು ಬಯಸುತ್ತಲಿವೆ.

ಈಗಿಲ್ಲಿ ೫೦ ಸಾವಿರ ಎನ್ನುಗಳಷ್ಟು ರೇಶಿಮೆಯನ್ನು ನೂಲುವ ಕಾರಖಾನೆಗಳಿವೆ. ಇವುಗಳಲ್ಲಿ ೩ಸಾವಿರ ಕಾರಖಾನೆಗಳು ನಿರ್ಯಾತ ವ್ಯಾಪಾರದಲ್ಲಿ ತೊಡಗಿವೆ. ಇವುಗಳಲ್ಲಿ ೩॥ ಲಕ್ಷ ತರುಣಿಯರು ಈ ಕೆಲಸದಲ್ಲಿ ತೊಡಗಿರುವರು. ೧೯೩೧ ರಿಂದುಂಟಾದ ರೇಶಿಮೆಕೈಗಾರಿಕೆಯು ಬಹು ಹಾನಿಗೀಡಾಗಿರುವುದು. ನಿರ್ಯಾತದ ಬೆಲೆಯೂ ವರುಷಾನುವರುಷವು ಕಡಿಮೆಯಾಗುತ್ತಲಿದೆ. ಅಮೇರಿಕೆಯೊಂದೇ ಇಲ್ಲಿಯ ರೇಶಿಮೆಯ ಒಟ್ಟು ನಿರ್ಯಾತದಲ್ಲಿ ೧೦೦ಕ್ಕೆ ೮೦ ರಂತೆ ಕೊಂಡುಕೊಳ್ಳುತ್ತದೆ. ಇದರಿಂದ ಅಮೇರಿಕೆಯಲ್ಲೇನಾದರು ಬದಲಾವಣೆಯಾದರೆ ತತ್‌ಕ್ಷಣವೇ ಅದು ಜಪಾನಿನ ಮೇಲೆ ಪರಿಣಾಮವಾಗುತ್ತದೆ. ಮುಖ್ಯವಾಗಿ ಇಲ್ಲಿಯ ಈ ರೇಶಿಮೆಯ ಉದ್ಯಮಕ್ಕೆ ಪ್ರಕೃತಿಯೂ ಹೆಚ್ಚು ಸಹಕಾರಿಯಾಗಿರುತ್ತದೆ. ಈ ನಿಸರ್ಗ ನಿರ್ಮಿತ ಸಹಾಯವು ಜಪಾನ ದೇಶಕ್ಕೊಂದು ದೇವರಿಂದ ದೊರೆತ ವರವಾಗಿದೆ. ಇದರ ಪ್ರಗತಿಯೇ ಜಪಾನದ ಪ್ರಗತಿಗೆ ಎಷ್ಟೋ ಮಟ್ಟಿಗೆ ಕಾರಣವಾಗಿರುತ್ತದೆ.

## ೧೯೩೪ ರ ಪ್ರಪಂಚದ ರೇಶಿಮೆಯ ಹುಟ್ಟುವಳಿ

| ದೇಶ | ಕಿಲೋಗ್ರ್ಯಾಮ್ಸ | ದೇಶ | ಕಿಲೋಗ್ರ್ಯಾಮ್ಸ |
|---|---|---|---|
| ಜಪಾನ | ೪೭೩೬೯೦೦೦ | ಸ್ಪೇನ | ೩೦೦೦ |
| ಚೈನಾ | ೬೩೧೬೦೦೦ | ಇಟಲಿ | ೨೮೩೫೦೦೦ |
| ಯುರೋಪ | ೯೩೦೦೦ | ಫ್ರಾನ್ಸ | ೭೭೦೦೦ |
| (ಪೂರ್ವಭಾಗ, ಮಧ್ಯಏಶಿಯಾ) | | ಒಟ್ಟು | ೫೭೫೫೭೦೦೦ |

## ಕೆಲ ವರುಷಗಳ ರೇಶಿಮೆಯ ನಿರ್ಯಾತವು

| ವರುಷ | ತೂಕ | ಬೆಲೆ |
|---|---|---|
| ೧೯೩೦ | ೬೩೬೧೯೬ | ೫೦೩೦೧೩೭೭೬ |
| ೧೯೩೧ | ೬೫೭೭೭೮ | ೪೦೦೪೯೬೬೫೭ |
| ೧೯೩೨ | ೬೨೯೩೭೧ | ೪೨೭೨೧೦೦೦೦ |
| ೧೯೩೩ | ೬೪೩೪೯೫ | ೪೨೧೯೫೯೦೦೦ |
| ೧೯೩೪ | ೬೯೮೭೭೧ | ೩೭೭೮೭೨೭೭೭ |

ದನಕರುಗಳ ಸಾಕುವಿಕೆಯಿಂದ ಜಪಾನದೇಶವು ವರುಷಕ್ಕೆ ೩೦ ಕೋಟಿ ಎನ್ನುಗಳ ಲಾಭವನ್ನು ಪಡೆಯುತ್ತದೆ. ೧೯೩೩ ರ ಕೊನೆಗೆ—ಒಟ್ಟು ೧೫ ಲಕ್ಷ ಹಸುಗಳಿದ್ದವು; ಇಷ್ಟೇ ಕುದುರೆಗಳು. ವಾಯುಗುಣದ ಪ್ರತಿಕೂಲತೆಯಿರುವದರಿಂದ ಕುರಿಗಳ ಸಾಗವಳಿಯು ತೀರ ಕಡಿಮೆಯಾಗಿದೆ. ಕೋಳಿ ತತ್ತಿಗಳ ಮಾರಾಟದಿಂದ ವರುಷಕ್ಕೆ ೭ ಕೋಟಿ ಎನ್ನುಗಳ ಲಾಭವಿದೆ.

ಜಪಾನದೇಶವು ಚಿಕ್ಕರಾಜ್ಯವಾದರೂ ಅರಣ್ಯವಿಸ್ತಾರದಲ್ಲಿಯೂ ಅರಣ್ಯ ಸಂಪತ್ತಿನ ಹುಟ್ಟುಸಳಿಯಲ್ಲಿಯೂ ದೊಡ್ಡರಾಜ್ಯಗಳ ಮಟ್ಟದಲ್ಲಿರುತ್ತದೆ. ಈ ತೆರದ ವ್ಯವಸಾಯದ ಪ್ರಗತಿಯಾಗಿರುವದಲ್ಲದೆ, ವ್ಯವಸಾಯ ಸಂಬಂಧವಾದ ಉದ್ಯಮಗಳೂ ಬೆಳೆದು ಒಂದಕ್ಕೊಂದು ಪರಿಪೋಷಕವಾಗಿ ದೇಶಾಭ್ಯುದಯಕ್ಕೆ ಕಾರಣೀಭೂತವಾಗಿವೆ.



ಕನ್‌ಫ್ಯೂಷಿಯಸ್ ಪಂಥದವರ ದೇವಮಂದಿರ



ಗುಡ್ಡದಿಂದ ಗುಡ್ಡಕ್ಕೆ ಹೋಗುವ
ವಿದ್ಯುತ್ ಜೋಕಾಲಿಗಳು



ಭಾರತೀಯ ದೇವಾಲಯದ ಮಾದರಿಯಲ್ಲಿರುವ
ಬೌದ್ಧಮಂದಿರ (ಟೋಕಿಯೋ)



ವಿದ್ಯುತ್ ರೇಲ್ವೆ

# ಜಪಾನದಲ್ಲಿಯ ಲೋಹಮಾರ್ಗ



<u>ಐದನೆಯ ಪ್ರಕರಣ</u>

## ನವ ಜಪಾನಿನ ಸೌಕರ್ಯಗಳು.



ಇಲ್ಲಿ, ೫೭ ವರುಷಗಳವಧಿಯೊಳಗೆ ಲೋಹಮಾರ್ಗವನ್ನು ಹಾಕುವ ಕೆಲಸವು ಅತ್ಯಂತ ರಭಸದಿಂದ ಸಾಗಿತು. ಈ ಉದ್ಯಮದಲ್ಲಿ ೩೯೦ ಕೋಟಿ ಎನ್ನುಗಳ ಬಂಡವಾಳವು ತೊಡಗಿರುವದಲ್ಲದೆ ೧೨೦೦೦ ಮೈಲುಗಳ ಲೋಹ ಮಾರ್ಗವು ಸಿದ್ಧವಾಗಿರುತ್ತದೆ. ಇದರಂತೆ ಜನರಿಗಾಗಿ ೫ ಸಾವಿರ ಗಾಡಿ ಗಳು, ಸಾಮಾನುಗಳಿಗಾಗಿ ೧೩೦೦೦ ಗಾಡಿಗಳಿರುವವು. ಪ್ರಯಾಣಿಕ ರಿಂದಲೂ, ಸಾಮಾನು ಸಾಗಿಸುವದರಿಂದಲೂ ಜಪಾನ ಸರಕಾರಕ್ಕೆ ೫೮ ಕೋಟಿ ಎನ್ನುಗಳ ಉತ್ಪನ್ನವಿರುತ್ತದೆ. ೧೮೫೩ರಲ್ಲಿ ಅಮೇರಿಕೆಯ ನಾವಿಕ ನಾದ ಪೇರಿಯು ಯಾಕೋಹಾಮದ ಹತ್ತಿರ ಒಂದು ಚಿಕ್ಕ ಹೊಗೆಬಂಡಿಯ ಪ್ರದರ್ಶನವನ್ನು ಮಾಡಿದನು. ಸರಕಾರದವರು ಅದನ್ನು ಕಂಡು ಲೋಹ ಮಾರ್ಗದ ನಿರ್ಮಾಣಕ್ಕಾಗಿ ಬೆನ್ನುಹತ್ತಿದರು. ಯಾಕೋಹಾಮದಲ್ಲಿರುವ ಬಿಳಿಯರು ಈ ಕೆಲಸಕ್ಕೆ ಅರ್ಜಿಗಳನ್ನು ಹಾಕಿದರು. ಕಡೆಗೆ ೧೮೬೯ ರಲ್ಲಿ ಇಂಗ್ಲಂಡಿನಿಂದ ೧೦,೦೦೦ ಪೌಂಡುಗಳ ಸಾಲ ತೆಗೆದು ಯಾಕೋಹಾಮು ದಿಂದ ಟೋಕಿಯೋದ ವರೆಗೆ ೨೦ ಮೈಲು ಲೋಹಮಾರ್ಗವು ೧೮೭೨ರಲ್ಲಿ ಹಾಕಲ್ಪಟ್ಟಿತು. ಇಂಗ್ಲಿಷ್, ಅಮೇರಿಕೆಯರನ್ನು ಈ ಕೆಲಸಕ್ಕೆ ನಿಯಮಿಸಿ ಕೊಂಡು ತಿಂಗಳಿಗೆ ೧ ಸಾವಿರ ಎನ್ನುಗಳಿಂದ ೬೦೦೦ ಎನ್ನುಗಳ ಸಂಬಳ ವನ್ನು ತೆತ್ತುತ್ತಿದ್ದರು. ಅವರ ಕೈಕೆಳಗೆ ದುಡಿಯುತ್ತಿದ್ದ ದೇಶೀಯರು ಆ

ವಿದ್ಯೆಯನ್ನೆಲ್ಲ ತಿಳಿದುಕೊಳ್ಳುವಂತೆ ಏರ್ಪಡಿಸಿ, ೧೮೭೯ರಲ್ಲಿ ಪರಕೀಯರನ್ನು ಕೆಲಸದಿಂದ ತೆಗೆದುಹಾಕಿ ಜಪಾನಿಯರೇ ಲೋಹಮಾರ್ಗ ನಿರ್ಮಾಣಕ್ಕೆ ಟೊಂಕಕಟ್ಟಿ ನಿಂತರು. ಮೊಟ್ಟಮೊದಲು ಸಿದ್ಧವಾದ (ಯಾಕೋಹಾಮು ದಿಂದ ಟೋಕಿಯೋದ ವರೆಗಿನ) ಲೋಹಮಾರ್ಗವು ಸುರುವಾದ ದಿನವು ಸಾರ್ವತ್ರಿಕವಾಗಿ ರಜೆಯ ದಿನವೆಂದು ಸಾರಿದ್ದಲ್ಲದೆ ಸ್ವಂತವಾಗಿ ಚಕ್ರವರ್ತಿ ಗಳೇ ಆ ಪ್ರಾರಂಭೋತ್ಸವವನ್ನು ಸಾಂಗಗೊಳಿಸಿದರು.

೧೮೮೧ರ ವರೆಗೆ ಸರಕಾರವೇ ಈ ಉದ್ಯಮವನ್ನು ಕೈಕೊಂಡಿತ್ತು. ಸರಕಾರದಿಂದ ಸಾರ್ವಜನಿಕ ಕೆಲಸಗಳಿಗೆ ಉತ್ತೇಜನ ದೊರೆಯುತ್ತಿದ್ದುದರ ಪರಿಣಾಮವಾಗಿ ಅನೇಕ ಕಂಪನಿಗಳು ಉದಯವಾದವು. ೧೮೮೯ರ ವೇಳೆಗೆ ಸರಕಾರ ಹಾಗು ಕಂಪನಿಗಳು ಕೂಡಿ ೧ ಸಾವಿರ ಮೈಲು ಲೋಹಮಾರ್ಗ ವನ್ನು ನಿರ್ಮಿಸಿದುವು. ೧೮೯೦ರಲ್ಲಿ ಲೋಹಮಾರ್ಗ ಶಾಸನಗಳ ಅನುಕೂಲತೆ ಉಂಟಾದ್ದರಿಂದ ಮತ್ತೆ ೨೦೦ ಮೈಲು ರೇಲ್ವೆ ಹೆಚ್ಚಾಯಿತು. ಆದರೆ ೧೯೦೬ರಲ್ಲಿ ಸರಕಾರವು ಲೋಹಮಾರ್ಗದ ಆಡಳಿತವನ್ನೆಲ್ಲ ತನ್ನ ಕೈಯಲ್ಲಿ ತೆಗೆದುಕೊಂಡು, ಜನೋಪಕಾರಿಯಾಗಲು ೧೧ ಕಂಪನಿಗಳಿಂದ ೩ ಸಾವಿರ ಮೈಲುಗಳ ರೇಲ್ವೆಯನ್ನು ಕೊಂಡುಕೊಂಡು, ಸಾರ್ವಜನಿಕ ಕಂಪನಿಗಳು ಸಂಪಾದಿಸುತ್ತಿದ್ದ ವಿಪುಲ ಲಾಭಕ್ಕೆ ಅಡ್ಡ ಬಂದಿತು.

ಸಾಧಾರಣವಾಗಿ ೧೯೧೧ ರಲ್ಲಿ ಒಬ್ಬ ಜಪಾನಿಯನು ೧.೫ ರಂತೆ ಪ್ರಯಾಣ ಮಾಡುತ್ತಿದ್ದನು. ಆದರೆ ಅದೇ ಈಗ ೨೪ರಂತಾಗಿದೆ. ಹೀಗೆಯೇ ಇಂಗ್ಲಂಡಿನಲ್ಲಿ ೩೪, ಜರ್ಮನಿಯಲ್ಲಿ ೨೮, ಫ್ರಾನ್ಸಿನಲ್ಲಿ ೨೨ರಂತೆ, ಜನರು ಪ್ರಯಾಣ ಮಾಡುತ್ತಾರೆ. ಪ್ರತಿವರುಷವೂ ಸಾಗಿಸುವ ಸಾಮಾನುಗಳ ತೂಕವು ಹೆಚ್ಚುತ್ತಲೇ ಇದೆ. ಸದ್ಯಕ್ಕೆ ಸರಾಸರಿಯಾಗಿ ೧೦ ಕೋಟಿ ಟನ್ನು ಗಳ ಸಾಮಾನುಗಳು ಅಲ್ಲಿಯ ಲೋಹಮಾರ್ಗದಿಂದ ಸಾಗಿಸಲ್ಪಡುತ್ತಿವೆ. ಪರದೇಶಗಳಲ್ಲಿ ಸಾಮಾನು ಸಾಗಿಸುವಿಕೆಯಿಂದ ಹೆಚ್ಚು ಲಾಭವು ದೊರೆಯು ತ್ತದೆ. ಅಮೇರಿಕೆಯಲ್ಲಿ ಪ್ರಯಾಣಿಕರಿಂದ ಬರುವ ಹಣದ ಐದು ಪಟ್ಟು ಹಣವು ಸಾಮಾನು ಸಾಗಿಸುವಿಕೆಯಿಂದ ಬರುತ್ತದೆ. ಅದೇ ಇಟಲಿ, ಜರ್ಮನಿ, ಫ್ರಾನ್ಸ ದೇಶಗಳಲ್ಲಿ ಇಮ್ಮಡಿಯಾಗಿದೆ. ಇಂಗ್ಲಂಡಿನಲ್ಲಿ ಮಾತ್ರ ೩೦ರಂತೆ

ಹೆಚ್ಚಿಗೆ ದೊರೆಯುವದು. ಆದರೆ ಜಪಾನಿನಲ್ಲಿ ಸಾಮಾನು ಸಾಗಿಸುವದರಿಂದ ಬರುವ ಹಣದ ಇಮ್ಮಡಿಯಾಗಿ ಪ್ರಯಾಣಿಕರಿಂದ ಬರುತ್ತದೆ. ಅಂದ ಮೇಲೆ ಇಲ್ಲಿ ರೇಲ್ವೆ ಪ್ರಯಾಣಿಕರ ಸಂಖ್ಯೆಯು ಎಷ್ಟು ಹೆಚ್ಚಾಗಿರುವದೆಂಬದು ವ್ಯಕ್ತವಾಗುತ್ತಿದೆ. ಪ್ರಯಾಣ ಬೆಳೆಸುವ ಹುಚ್ಚೂ ಸಹ ಇವರಲ್ಲಿ ಹೆಚ್ಚಾಗಿದೆಯೆನ್ನಬಹುದು.

ಸದ್ಯಕ್ಕೆ ಜಪಾನಿನಲ್ಲಿ ಸರಾಸರಿ ೧೦೦೦೦ ಜನಸಂಖ್ಯೆಗೆ ಎರಡೆ ಮೈಲುಗಳ ಲೋಹಮಾರ್ಗದ ಪ್ರಮಾಣವಿದೆ. ಅಮೇರಿಕೆಯಲ್ಲಿ ೨೭ ಮೈಲುಗಳೂ, ಫ್ರಾನ್ಸದಲ್ಲಿ ೭ ಮೈಲೂ, ಜರ್ಮನಿಯಲ್ಲಿ ೫.೨ ಮೈಲೂ, ಗ್ರೇಟ ಬ್ರಿಟನ್ನದಲ್ಲಿ ೪.೬ ಮೈಲೂ, ಇಟಲಿಯಲ್ಲಿ ೨.೫ ಮೈಲೂ ಲೋಹಮಾರ್ಗದ ಪ್ರಮಾಣ ಬೀಳುತ್ತದೆ. ಈಗ ಜಪಾನದಲ್ಲಿ ೨ ಸಾವಿರ ಮೈಲು ಲೋಹಮಾರ್ಗವು ನಡೆಯುತ್ತಿದೆ. ಅದು ಮುಗಿಯಿತೆಂದರೆ ರೇಲ್ವೆಯ ಪ್ರಮಾಣದಲ್ಲಿ ಇಟಲಿ ದೇಶವನ್ನು ಮಿಕ್ಕುತ್ತದೆ. ಜಪಾನಿಯವರು ೨॥ ಲಕ್ಷ ಚದರ ಮೈಲುಗಳ ಪ್ರದೇಶದಲ್ಲಿ ಇಷ್ಟು ಲೋಹಮಾರ್ಗ ನಿರ್ಮಾಣದ ಉದ್ಯಮವನ್ನು ಸಾಗಿಸುತ್ತಿರುವದು ಆಶ್ಚರ್ಯಕರವೆ ಸರಿ.

ಆರಂಭದಲ್ಲಿ ರೇಲ್ವೆಯ ಆಡಳಿತವು ಇಂಜನಿಯರಿಂಗ ಖಾತೆಯ ಕೈ-ಕೆಳಗಿದ್ದಿತು. ಅನೇಕ ಬದಲಾವಣೆಗಳುಂಟಾಗಿ ಕಡೆಗೆ ೧೯೧೫ರಲ್ಲಿ ರೇಲ್ವೆ ಇಲಾಖೆಯು ಸ್ಥಾಪಿತವಾಯಿತು. ಸದ್ಯಕ್ಕೆ ಸಾಮಾನು ಸಾಗಿಸಲು ಇಡಿ ಇಲಾಖೆಯಲ್ಲಿ ೬ ಭಾಗಗಳನ್ನು ಮಾಡಿ ಕೆಲಸ ಸಾಗಿಸಿದ್ದಾರೆ. ರೇಲ್ವೆಯ ಕೂಲಿಕಾರರು ಮುಷ್ಕರ ಹಿಡಿಯುವಂಥ ಪ್ರಸಂಗವು ಜಪಾನಿನಲ್ಲಿ ಬಂದಿರುವದೇ ಇಲ್ಲ. ವಿದ್ಯಾವಂತರಾದ ಕೂಲಿಕಾರರೂ, ಯೋಗ್ಯ ಅಧಿಕಾರಿಗಳೂ, ಅನುಕೂಲತೆಗಳೂ ಇರುವದರಿಂದ ಅಂಥ ಪ್ರಸಂಗವೇಳಲು ಆಸ್ಪದವೇ ಬರಲಾರದು. ೧೯೧೧ರಲ್ಲಿ ಅಧಿಕಾರಿ ಹಾಗು ಕೂಲಿಕಾರರ ಪರಸ್ಪರ ಸಹಾಯಕ್ಕಾಗಿ ಸರಕಾರವು ಒಂದು ಸಂಘವನ್ನೇರ್ಪಡಿಸಿ ಸ್ನೇಹವರ್ಧನೆಯಾಗಲು ಅನುವುಮಾಡಿಕೊಟ್ಟಿದೆ. ಈ ಸಂಘಕ್ಕೆ ಅಧಿಕಾರಿಗಳ ಸಂಬಳದಲ್ಲಿ ನೂರಕ್ಕೆ ೬ರಂತೆ, ಕೂಲಿಕಾರರು ೫ರಂತೆ ಕೊಟ್ಟು, ಕೂಡಿದ ಹಣದಿಂದ ಕೂಲಿಕಾರರ ಹಣದ ತೊಂದರೆಗೆ ಸಹಾಯ ಮಾಡುತ್ತಾರೆ. ಕೂಲಿಕಾರರಿಗೆ ಕಡಿಮೆ

ದರಕ್ಕೆ ಗೃಹೋಪಯೋಗಿ ಪದಾರ್ಥಗಳು ದೊರೆಯುವಂತೆ ಒಂದು ಸಹಕಾರಿ ಸಂಘವನ್ನೇರ್ಪಡಿಸಿದ್ದಾರೆ. ಸಂಘದಿಂದ ಸದಸ್ಯರಿಗೆ ೨೦೦ ರೂಪಾಯಿಗಳ ವರೆಗೆ ಸಾಲವನ್ನು ಕೊಡಲಾಗುವದು. ೧೯೩೫ರಲ್ಲಿ ಈ ಸಂಘಕ್ಕೆ ೧೯೨೦೦೦ ಸದಸ್ಯರಿದ್ದರು. ೭,೪೩,೦೦,೦೦೦ ರೂಪಾಯಿಗಳ ಬಾಂಡವಲವು ಸಂಗ್ರಹ ವಾಗಿತ್ತು. ಇದೇ ಎಲ್ಲಕ್ಕೂ ದೊಡ್ಡ ಸಂಘವು. ರೇಲ್ವೆಯ ಆಳುಗಳಿಗಾಗಿ ೬ ದೊಡ್ಡ ದೊಡ್ಡ ಆಸ್ಪತ್ರೆಗಳಿವೆ. ಇಲ್ಲಿ ಅವರೆಲ್ಲರಿಗೂ ಔಷದವು ಉಚಿತ ವಾಗಿ ಕೊಡಲಾಗುತ್ತದೆ.

೫೬೭೨ ಉಗಿಬಂಡಿ, (Steam locomotive gross weight 300677 tons) ೯೨ ವಿದ್ಯುಚ್ಛಕ್ತಿಯಿಂದ ನಡೆಯುವಂಥವು, (Electric locomotives gross weight 5672 tons) ೫೧೧೦೨೬ ಜನರು ಕೂಡುವ ೯೮೪೫ ಗಾಡಿ ಗಳು, ೯೨೮೯೨ ಜನರು ಕೂಡುವ ೯೨೧ ವಿದ್ಯುಚ್ಛಕ್ತಿಯ ಗಾಡಿಗಳು, ೮೧೫೪೯೧ ಟನ್ ತೂಕದ ಸಾಮಾನುಗಳನ್ನು ಹೊರಬಲ್ಲ ೬೪೨೧೧ ಗಾಡಿ ಗಳನ್ನು ಸದ್ಯಕ್ಕೆ ಸರಕಾರದವರು ಸಿದ್ಧಗೊಳಿಸಿದ್ದಾರೆ. ರೇಲ್ವೆಗೆ ಬೇಕಾ ಗುವ ಎಲ್ಲ ಸಾಮಾನುಗಳು ಮೊದಮೊದಲು ಪರದೇಶದಿಂದ ಬರುತ್ತಿತ್ತು. ಆದರೆ ಈಗ ಓಸಾಕಾ ತೀಸಾ ಕೈಸಾ, ಕವಾ ಸಾಕಿ ಕೈಸಾ, ಹಿತಚಿ ಕೈಸಾ ಎಂಬ ಮೂರು ಕಂಪನಿಗಳೇ ಜಪಾನಕ್ಕೆ ಬೇಕಾಗುವ ಯಾವತ್ತು ಸಾಮಾನುಗಳನ್ನು ಸಿದ್ಧಮಾಡಿ ಒದಗಿಸುತ್ತವೆ.

ಜಪಾನಿನ ರೇಲ್ವೆಗಳ ವೆಚ್ಚವು ಗಳಿಕೆಯಲ್ಲಿ ನೂರಕ್ಕೆ ೫೬ರಂತಿರುವದು. ಆದರೆ ಅದೇ ವೆಚ್ಚವು ಅಮೇರಿಕೆಯಲ್ಲಿ ೭೪, ಬ್ರಿಟನ್‌ದಲ್ಲಿ ೮೯, ಫ್ರಾನ್ಸದಲ್ಲಿ ೮೪, ಜರ್ಮನಿಯಲ್ಲಿ ೮೦ರಷ್ಟು ಇರುವದು. ಇಷ್ಟು ವೆಚ್ಚ ಬರಲು ಆಯಾ ದೇಶದ ಜೀವಿಸುವ ಮಟ್ಟವೂ, ಕಾರ್ಯದಕ್ಷತೆಯೂ ಕಾರಣವಾಗಿರುತ್ತವೆ. ಇದರಂತೆ ಪ್ರಯಾಣಿಕರಿಗೆ ಒಂದು ಮೈಲಿಗೆ ೧ತ್ತಿ ಕಾಸು, ಒಂದು ಟನ್ ಸಾಮಾನು ಕಳಿಸುವದಕ್ಕೆ ೩ ಕಾಸು ವೆಚ್ಚವು ಇಲ್ಲಿ ತಗಲುತ್ತದೆ; ಆದರೆ ಅಮೇರಿಕೆಯಲ್ಲಿ ಜನರಿಗೆ ೮ ಕಾಸು, ಸಾಮಾನಿಗೆ ೩ ಕಾಸು, ಬ್ರಿಟನ್‌ದಲ್ಲಿ ಜನರಿಗೆ ೬ ಕಾಸು, ಸಾಮಾನಿಗೆ ೮ ಕಾಸು ತಗಲುತ್ತದೆ.

ಜಪಾನಿನ ಉದ್ದವಾದ ರೇಲ್ವೆಗಳು ಮಧ್ಯಮ ಪ್ರಮಾಣದಲ್ಲಿ (ಮಿಟರ್

ಗೇಜ್) ಹಾಕಲ್ಪಟ್ಟಿರುವವು. ಸೇತುವೆ ಮೊದಲಾದವು ಅಷ್ಟು ಗಟ್ಟಿಮುಟ್ಟಿ ಇಲ್ಲದ್ದರಿಂದ ಗಾಡಿಗಳ ವೇಗವು ತಾಸಿಗೆ ೩೦ ಮೈಲು ಮಾತ್ರ ಇರುತ್ತದೆ. ರೇಲ್ವೆಗಳು ನಿಯಮಿತ ಕಾಲವನ್ನು ಎಂದೂ ಮೀರಲಾರವು. ಅಷ್ಟು ಸರಿಯಾಗಿ ಕಾಲಪರಿಮಿತಿಯನ್ನು ಕಾಯ್ದುಕೊಂಡಿರುವವೆಂದು ಅನೇಕ ಪಾಶ್ಚಿಮಾತ್ಯರು ಅಭಿಪ್ರಾಯಪಟ್ಟಿದ್ದಾರೆ. ಇತ್ತೀಚೆ ವಿದ್ಯುಚ್ಛಕ್ತಿಯಿಂದ ಹಲವು ಗಾಡಿಗಳು ನಡೆಸಲ್ಪಡುತ್ತಿವೆ. ಟೋಕಿಯೋ, ಓಸಾಕಾ, ಯಾಕೋಹಾಮ ಮೊದಲಾದೆಡೆಗಳಲ್ಲಿ ಇಂಥ ಗಾಡಿಗಳು ಓಡಾಡುವವು. ವಿದ್ಯುಚ್ಛಕ್ತಿಯ ಸಹಾಯದಿಂದ ನಡೆಯುವ ೬೦೦ ಮೈಲುಗಳ ರೇಲ್ವೆಯು ಈಗ ಜಪಾನಿನಲ್ಲಿ ಸಿದ್ಧವಿದೆ.

ಇಲ್ಲಿಯ ರೇಲ್ವೆ ಅಧಿಕಾರಿಗಳ ವರ್ತನವು ಪ್ರಯಾಣಿಕರಿಗೆ ಸಾನುಕೂಲವಾಗಿರುತ್ತದೆ. ಪರಸ್ಪರರಲ್ಲಿ ತಂಟೆಗಳುದ್ಭವಿಸುವದಿಲ್ಲೆಂದೆ ಹೇಳಬಹುದು. ಗಾಡಿಯ ಸಂರಕ್ಷಕರು ಅದನ್ನು ರಕ್ಷಿಸುವದಲ್ಲದೆ ಗಾಡಿಯ ಸ್ವಚ್ಛತೆಯ ಕಡೆಗೂ ಲಕ್ಷಕೊಡುತ್ತಾರೆ. ಸಿಕ್ಕಿದ ಸ್ಥಳದಲ್ಲಿ ಉಗುಳದಷ್ಟು ಪ್ರಯಾಣಿಕರ ಸ್ವಭಾವವು ಮಾರ್ಪಟ್ಟಿರುತ್ತದೆ. ಸಹಸಾ ಗಾಡಿಯಲ್ಲಿ ಹೊಲಸನ್ನು ಚಲ್ಲಲಾರರು. ಸ್ಥಳದಭಾವದ ಮೂಲಕ ಏಕೋಪಕ್ಕೆ ತೆರಳಲಾರರು. ಮಲ್ಲಯುದ್ಧವನ್ನು ಮಾಡದೆ ಸುಮ್ಮನೆ ನಿಂತುಕೊಂಡು ತೆರಳುವರು. ಇನ್ನೂ ಜಪಾನಿನಲ್ಲಿ ಸ್ತ್ರೀಯರು ಗಂಡಸರಿಗಿಂತ ಹೆಚ್ಚಿನವರೆಂಬ ಭಾವನೆ ಹುಟ್ಟದ್ದರಿಂದ ಗಾಡಿಯಲ್ಲಿ ಕುಳಿತಿದ್ದ ಸ್ತ್ರೀಯರು ಗಂಡಸರಿಗೆ ಕುಳಿತುಕೊಳ್ಳಲು ಅನುವುಮಾಡಿಕೊಟ್ಟು ತಾವು ನಿಲ್ಲುವಷ್ಟು ಸ್ವಭಾವವುಳ್ಳವರಾಗಿದ್ದಾರೆ. ಟಿಕೆಟ್ ಪರೀಕ್ಷಕನಂತೂ ಪ್ರಯಾಣಿಕರೊಡನೆ ಸಭ್ಯತೆಯಿಂದ ವರ್ತಿಸುವನು. ಸುಮ್ಮಸುಮ್ಮನೆ ಜನರ ಮೇಲೆ ಹರಿಹಾಯುವಂಥ ಆಂಗ್ಲರು ಇಲ್ಲಿರುವದಿಲ್ಲ.

ಜಪಾನಿನ ರೇಲ್ವೆ ಗಾಡಿಗಳಲ್ಲಿ ೧ನೆಯ, ೨ನೆಯ, ೩ನೆಯ ತರಗತಿಯೆಂಬ ಮೂರು ವಿಭಾಗಗಳುಂಟು. ಇಲ್ಲಿಯ ಮೂರನೆಯ ತರಗತಿಯನ್ನು ಭಾರತದಲ್ಲಿಯ ರೇಲ್ವೆಯ ಎರಡನೆಯ ತರಗತಿಗೆ ಹೋಲಿಸಬಹುದು. ಸುಮಾರಾಗಿ ೫೦೦ ಮೈಲು ಪ್ರಯಾಣವನ್ನು ೩ನೆಯ ತರಗತಿಯಿಂದ ೫ ರೂಪಾಯಿಗಳಲ್ಲಿ

ಮಾಡಬಹುದು. ೩ನೆಯ ತರಗತಿಯಲ್ಲಿ ಒಬ್ಬಿಬ್ಬರು ಕುಳಿತುಕೊಳ್ಳುವ ಮೆತ್ತಗಿರುವ ಸೋಫಾಗಳಿರುತ್ತವೆ. ಇಲ್ಲಿ ಚಳಿಗಾಲದ ಚಳಿಯನ್ನು ಕಡಮೆ ಮಾಡಲು ಕೆಲವು ಸಾಧನಗಳಿವೆ. ಪ್ರಯಾಣಕ್ಕೆ ಹೊರಡುವ ಒಂದೆರಡು ದಿನ ಮೊದಲೆ ಅಧಿಕಾರಿಗಳಿಗೆ ತಿಳಿಸಿದ ಪಕ್ಷದಲ್ಲಿ ೧೨ ಆಣೆ ಹೆಚ್ಚಿಗೆ ಕೊಟ್ಟರೆ ಮಲಗಲು ಸ್ಥಳವು ದೊರೆಯುತ್ತದೆ. ಕೆಲ ಸಾಹುಕಾರರೂ ಸಹ ೧೨ ಆಣೆ ಹೆಚ್ಚಿಗೆ ಕೊಟ್ಟು ಟೋಕಿಯೋ ಸ್ಟೇಶನ್ನಿನಲ್ಲಿ ರಾತ್ರಿ ೧೦ ಗಂಟೆಗೆ ಕುಳಿತು, ಮಲಗುವ ಸ್ಥಳದಲ್ಲಿ ಸುಖವಾಗಿ ಮಲಗಿ ಮುಂಜಾನೆ ೭ ಗಂಟೆಗೆ ೪೦೦ ಮೈಲುಗಳ ಮೇಲಿರುವ ಕೊಬೆಯನ್ನು ತಲಪುತ್ತಾರೆ. ೨ನೆಯ ತರಗತಿಯು ೩ನೆಯ ತರಗತಿಗಿಂತ ಸ್ವಲ್ಪ ಚನ್ನಾಗಿ ಕಾಣುವದು. ಮೊದಲನೆಯ ತರ-ಗತಿಯು ಉತ್ತಮವಿದ್ದರೂ ಅನೇಕ ಗಾಡಿಗಳಲ್ಲಿ ಈ ಬಂಡಿಗಳನ್ನು ಹಚ್ಚುವದಿಲ್ಲ. ಯಾಕೆಂದರೆ ಎಲ್ಲ ಸೌಕರ್ಯಗಳು ೨, ೩ ನೆಯ ತರಗತಿಯಲ್ಲಿ ದೊರೆಯುವದರಿಂದ ಯಾರೂ ಮೊದಲನೆಯ ತರಗತಿಯಲ್ಲಿ ಪ್ರಯಾಣ ಮಾಡಲು ಬಯಸುವದಿಲ್ಲ. ಕೆಲವರು ಶಾಂತಿಗಾಗಿ ೨ನೆಯ ತರಗತಿಯಲ್ಲಿ ಪ್ರಯಾಣಮಾಡುವರಲ್ಲದೆ ಅನುಕೂಲತೆಗಾಗಿ ಅಲ್ಲ. ಮತ್ತೆ ಕೆಲವರು ೩ನೆಯ ತರಗತಿಯಲ್ಲಿ ಎಲ್ಲ ಅನುಕೂಲತೆಯಿದ್ದರೂ, ತಮ್ಮ ಮಟ್ಟನ್ನುಳುಸಿ ಕೊಳ್ಳಲು ೨ನೆಯ ತರಗತಿಯಲ್ಲಿ ಪ್ರಯಾಣ ಬೆಳೆಸುತ್ತಾರೆ.

ಪ್ರತಿಯೊಂದು ರೇಲ್ವೆ ಗಾಡಿಯಲ್ಲಿ ಫಲಹಾರದ ಡಬ್ಬಿ ಇದ್ದೇ ಇರುವದು. ಗಾಡಿಯು ಹೊರಟೊಡನೆ ಫಲಹಾರದ ಡಬ್ಬಿಯ ಹುಡುಗಿಯರು (ಜಪಾನದಲ್ಲಿ ಫಲಹಾರದ ಅಂಗಡಿ, ಊಟದ ಮನೆ ಮೊದಲಾದವುಗಳಲ್ಲಿ ಹುಡುಗಿಯರೇ ಉಪಚಾರಕರು) ತಿಂಡಿ ತಿನಿಸುಗಳ ಯಾದಿಯನ್ನು ಪ್ರಯಾಣಿಕರಿಗೆ ಕೊಡುತ್ತಾರೆ. ಅದರಿಂದ ಹಸಿವಾದವರು ಆ ಡಬ್ಬಿಗೆ ಹೋಗಿ (ಭಾರತದಲ್ಲಿಯ ಜಿ. ಆಯ್. ಪಿ. ಗಾಡಿಗಳಂತೆ ಗಾಡಿಯು ಹೋಗುವಾಗಲೇ ಗಾಡಿಯ ತುಂಬೆಲ್ಲ ಹೋಗಲು ಅನುಕೂಲವಿರುವಂತೆ ಇಲ್ಲಿಯೂ ಇದೆ.) ಬೇಕಾದುದನ್ನು ಭುಂಜಿಸಿ ಬೇರೆಯವರಿಗೆ ಸ್ಥಳವನ್ನು ಮಾಡಿಕೊಡುವರು. ತಿಂಡಿ-ತೀರ್ಥಗಳಲ್ಲಿ ಯಾವ ಮತಭೇದವು ಬಾರದ್ದರಿಂದ ಪ್ರತಿಯೊಬ್ಬರೂ ನಿಸ್ಸಂಕೋಚವಾಗಿ ಸ್ವೀಕರಿಸುತ್ತಾರೆ. ಗಾಡಿಯು ನಿಲ್ದಾಣಕ್ಕೆ ಬಂದೊಡನೆ ಪೋರ್ಟರರು ನಿಲ್ದಾಣದ ಹೆಸರನ್ನು ಗಟ್ಟಿಯಾಗಿ ಕೂಗುವರು.

ಸಾಮಾನು ಹೊರಲು ರೇಲ್ವೆಯ ಹಮಾಲಿಗಳಿರುತ್ತಾರೆ. ಇವರ ಕೂಲಿಯೂ ಅಧಿಕಾರಿಗಳಿಂದ ಗೊತ್ತುಮಾಡಲ್ಪಟ್ಟದ್ದರಿಂದ ಪ್ರಯಾಣಿಕರಿಗೆ ತೊಂದರೆ-ಯಾಗುವದಿಲ್ಲ.

ಪರಕೀಯರ ಸೌಲಭ್ಯಕ್ಕಾಗಿ ನಿಲ್ದಾಣದ ಹೆಸರು ಇಂಗ್ಲಿಷ್‌ದಲ್ಲಿ ಬರೆಯಲ್ಪಟ್ಟಿದೆ. ಪ್ರಯಾಣಿಕರಿಗೆ ಭಾಷೆಯ ತೊಂದರೆಯಾಗದಂತೆ ನಿಲ್ದಾಣ ಗಳಲ್ಲೆಲ್ಲ ಒಬ್ಬೊಬ್ಬ ಚನ್ನಾಗಿ ಇಂಗ್ಲಿಷು ಬಲ್ಲ ಕಾರಕೂನನನ್ನು ನಿಯಮಿಸಿ ರುತ್ತಾರೆ. ಅವನು ಅವರ ತೊಂದರೆಯನ್ನು ನಿವಾರಿಸುವನು. ನಿಲ್ದಾಣ ಗಳಲ್ಲಿ ತಂಗಲು ದೊಡ್ಡದಾದ ಸ್ಥಳವಿದ್ದು ಮಕಮಲ್ಲಿನ ಕುರ್ಚಿಗಳುಳ್ಳದಾ ಗಿರುವದು. ಪ್ರಯಾಣಿಕರಿಗೆ ಇಷ್ಟೆಲ್ಲ ಸೌಕರ್ಯಗಳಿರುವದರಿಂದ ಶಾಂತ ಮನಸ್ಕರಾಗಿ ತಮ್ಮ ಪ್ರಯಾಣವನ್ನು ಮುಗಿಸಿಕೊಳ್ಳುತ್ತಾರೆ.

ರೇಲ್ವೆಯವರು ಅನತಿದೂರ ಓಡಾಡುವ ಹೊಗೆಬಂಡಿಗಳ ರಕ್ಷಕರೆಂದು ಪ್ರೌಢ ಹುಡುಗೆಯರನ್ನು ನಿಯಮಿಸಿಕೊಳ್ಳುತ್ತಾರೆ. ಇವರು ಗಂಡಸರಿ ಗಿಂತಲೂ ಒಂದು ತೂಕ ಹೆಚ್ಚಾಗಿಯೇ ದಕ್ಷತೆಯಿಂದ ದುಡಿಯುತ್ತಾರೆ. ಸಂಬಳವೂ ಕಡಮೆಯಿರುವದರಿಂದ ಇವರನ್ನೆ ಆರಿಸಲು ರೇಲ್ವೆಗೆ ಲಾಭ ದಾಯಕವಿರುತ್ತದೆ. ಹುಡುಗಿಯರು ಹಣಕಾಸಿನ ವಿಷಯದಲ್ಲಿ ಬಹು ಎಚ್ಚರಿಕೆಯಿಂದ ವರ್ತಿಸುವರಾದುದರಿಂದ ಇವರೇ ಟಿಕೆಟುಗಳನ್ನು ಮಾರುವ ವ್ಯವಸ್ಥೆಯಿದೆ. ವಿದ್ಯಾವತಿಯರಾದ ಇವರು ಇಷ್ಟು ಕಾರ್ಯವನ್ನು ಜಾಗರೂಕತೆಯಿಂದ ಮಾಡುವದು ಆಶ್ಚರ್ಯವಲ್ಲ. ಟಿಕೆಟು ಕೊಳ್ಳುವಾಗ ಪ್ರಯಾಣಿಕರು ಗರುಡವಾಹನಕ್ಕೆ ಆಸ್ಪದ ಕೊಡದೆ, ಸಾಲುಸಾಲಾಗಿ ನಿಂತು ಸಭ್ಯರೀತಿಯಿಂದ ವರ್ತಿಸುವರು. ಪ್ರಯಾಣ ಕಾಲದಲ್ಲಿ ಯಾರಾದರೂ ಸಾಮಾನುಗಳನ್ನು ಕಳೆದುಕೊಂಡರೆ, ಅಂಥವುಗಳನ್ನು ಪ್ರತಿಯೊಂದು ಸ್ಟೇಶನ್‌ದಲ್ಲಿ ಎಲ್ಲರ ಕಣ್ಣಿಗೂ ಬೀಳುವಂಥ ಸ್ಥಳದಲ್ಲಿ ಪ್ರದರ್ಶಿಸುತ್ತಾರೆ. ಕಳೆದುಕೊಂಡಂಥವರು ತಮ್ಮ ಸಾಮಾನುಗಳಿಗಾಗಿ ತಕ್ಕ ಗುರುತುಗಳನ್ನು ಹೇಳಿ ತಿರುಗಿ ಪಡೆಯುವ ವ್ಯವಸ್ಥೆಯಿರುತ್ತದೆ. ಇಂಥ ಸಣ್ಣ ಪುಟ್ಟ ವಿಷಯ ಗಳಲ್ಲಿಯೂ ಇವರು ತಲೆಹಾಕಿ, ಪೂರ್ತಿಗೊಳಿಸುವದರಿಂದ ಕೀರ್ತಿವೆತ್ತ ಶಕ್ತಿ ಸಂಪನ್ನ ಜನಾಂಗವಾಗಿ ಪರಿಣಮಿಸಲು ಸಾಧ್ಯವಾಗಿರುವದು.

## ಬೇರೆ ವಾಹನಗಳ ಸೌಕರ್ಯ

ಜಪಾನದ ಅನೇಕ ಪಟ್ಟಣಗಳಲ್ಲಿ ಟ್ರಾಮ್ ಕಾರ್ ಸರ್ವ್ಹೀಸು ಏರ್ಪಡಿಸಲ್ಪಟ್ಟಿದೆ. ೧೮೮೩ರಲ್ಲಿ ಮೊದಲನೆಯ ಸಲಕ್ಕೆ, ಫ್ರಾನ್ಸದಿಂದ ಪಡೆದ ಸಾಲದಿಂದ ಟೋಕಿಯೋ ನಗರದಲ್ಲಿ ಟ್ರಾಮ್‌ಕಾರ್ ಸರ್ವ್ಹೀಸು ಸುರುವಾಯಿತು. ಇಡೀ ದೇಶದಲ್ಲೀಗ ೧೮೨೦ ಮೈಲುಗಳ ಟ್ರಾಮ್ ಲೈನಿದೆ. ಇವೆಲ್ಲವು ಕೇವಲ ಜನರ ದೆಶೆಯಿಂದಿರುವದರಿಂದ ವಾರ್ಷಿಕ ಉತ್ಪನ್ನವು ೩೦ ಲಕ್ಷ ಎನ್ನು ಮಾತ್ರವಿದೆ. ೧೯೩೫ರಲ್ಲಿ ಇಡೀ ಜಪಾನ ದೇಶದ ಟ್ರಾಮ್‌ನಲ್ಲಿ ೧,೫೭,೦೭,೩೯,೯೬೫ ಜನರು ಪ್ರಯಾಣಮಾಡಿದರು. ಒಟ್ಟು ೧೫೭ ಟ್ರಾಮ್ ಕಂಪನಿಗಳಿವೆ. ಜಗತ್ತಿನಲ್ಲಿಯೆ ೩ನೆಯ ಪಟ್ಟಣವಾದ ಟೋಕಿಯೋದ ಒಂದು ತುದಿಯಿಂದ ಇನ್ನೊಂದು ತುದಿಯವರೆಗೆ ೯ ಕಾಸಿನ ವೆಚ್ಚದಿಂದ ಹೋಗಬಹುದು. ದೂರಿನ ಪ್ರಯಾಣವನ್ನು ಟ್ರಾಮಿನಿಂದ ಮಾಡುವದರಿಂದ ಹೆಚ್ಚು ಹೊತ್ತು ಹಿಡಿಯುವದು. 'ಹೊತ್ತೇ ಹಣ'ವೆಂದು ಭಾವಿಸುವ ಜಪಾನಿಯರು ಹಣದ ಮುಖವನ್ನು ನೋಡದೆ ಮೋಟಾರಿನಿಂದ ಪ್ರವಾಸ ಮಾಡುತ್ತಾರೆ. ೧೦ ಮೈಲುಗಳ ಪ್ರಯಾಣವನ್ನು ೯ ಕಾಸಿನಿಂದ ಮಾಡಲಿಕ್ಕೆ ಟ್ರಾಮ್ ಬಹು ಅನುಕೂಲವಿದ್ದು ಹೊತ್ತೂ ಹೆಚ್ಚು ಹಿಡಿಯಲಾರದು. ಈ ಟ್ರಾಮಿನಲ್ಲಿ ಕೂಡಲು ೬೦ ಜನರಿಗೆ ಸ್ಥಳವಿದೆ. ಟ್ರಾಮು ನಡೆಯಿಸುವವರು ಗಂಡಸರು. ಟ್ರಾಮಿನ ಕಂಡಕ್ಟರ್ ಹಾಗು ರಕ್ಷಕರು ಯಾವಾಗಲೂ ಹೆಂಗುಸರೇ ಇರುವರು. ಇವರು ತಮ್ಮ ಕೆಲಸವಲ್ಲದೆ ಹೊರಗಿನಿಂದ ಮಕ್ಕಳು-ಮರಿಗಳನ್ನು ಒಳಕ್ಕೆ ಎತ್ತುವದರಲ್ಲಿಯೂ, ಗಾಡಿಯಿಂದಿಳಿಯುವಾಗ ಪ್ರವಾಸಿಕರಿಗೆ ಸಹಾಯ ಮಾಡುತ್ತಾರೆ. ಜಪಾನಿನಲ್ಲಿ ರೇಲ್ವೆ, ಟ್ರಾಮ್, ಬಸ್ಸು ಮೊದಲಾದವುಗಳಲ್ಲಿ ಉಡುಪಿನ ನಿರ್ಬಂಧವಿರುವದರಿಂದ ಹೆಂಗುಸರು ಸಿಪಾಯಿಗಳಂತೆ ಕಾಣಿಸುವರು. ಟ್ರಾಮ್ ನಡೆಯಿಸುವವರಿಗೆ ತಿಂಗಳಿಗೆ ೩೫ ರೂ. ಸಂಬಳವೂ, ಕಂಡಕ್ಟರ್, ಗಾರ್ಡ್ (ಹೆಂಗುಸರಿಗೆ) ೨೦, ೨೫ ರೂಪಾಯಿ ಸಂಬಳ ದೊರೆಯುವದು. ಹಳ್ಳಿಗಳಿಂದ ಪಟ್ಟಣಕ್ಕೆ ಬಂದು ಕೆಲಸ ಮಾಡುವ ಈ ವಿದ್ಯಾವತಿಯರು ನಾಲ್ಕೈದು ಜನರು ಒಂದೆಡೆಗಿದ್ದು ಮಿತವ್ಯಯದಿಂದ ಜೀವನವನ್ನು ಸಾಗಿಸುವರು. ೪ ವರುಷಗಳ ಮೇಲೆ ತಮ್ಮ ಮದುವೆಗಾಗಿ ಕೈಯಲ್ಲಿ ೫೦೦-೬೦೦ ರೂ. ಮಾಡಿ

ಕೊಂಡು ತಮ್ಮ ಹಳ್ಳಿಗಳಿಗೆ ತಿರುಗಿ ಹೋಗುವರು. ಆದರೆ ರೂಪವತಿಯಾದ ಕಂಡಕ್ಟರಳ ಕಣ್ಣಿಗೆ ಹಣವಂತ ತರುಣರ ದೃಷ್ಟಿಯು ಬಿದ್ದು, ಸ್ನೇಹವು ಹೆಚ್ಚಾದರೆ ಅವಳ ಚರಿತ್ರೆಯೆ ಬೇರೆಯಾಗುತ್ತದೆ. ಟ್ರಾಮಿನ ವೇಳೆಯು ಮುಂಜಾನೆ ೬ ಗಂಟೆಗೆ ಆರಂಭವಾಗಿ ರಾತ್ರಿ ೧೨ರ ವರೆಗಿರುವದು. ಈ ಮಧ್ಯೆ ಕೆಲಸಗಾರರು ಎರಡಾವರ್ತಿ ಬದಲಾಯಿಸಲ್ಪಡುವರು.

## ಬಸ್ಸು ಸರ್ವ್ಹೀಸು

ಜಪಾನಿನಲ್ಲಿ ಇಂದಿಗೆ ಬಸ್ಸು ಸರ್ವ್ಹೀಸಿಲ್ಲದ ಹಳ್ಳಿಯೇ ಇರುವದಿಲ್ಲ. ಒಂದು ಗ್ಯಾಲನ್ ಪೆಟ್ರೋಲಿಗೆ ೬ತ್ತಿ ಆಣೆ ಬೀಳುವದರಿಂದ ಇಷ್ಟು ಇದರ ಪ್ರಚಾರವಾಗಲು ಕಾರಣವಾಗಿದೆ. ದೊಡ್ಡ ಪಟ್ಟಣಗಳಲ್ಲಿಯೂ ಟ್ರಾಮಿನ ಜೊತೆಗೆ ಬಸ್ಸು ಸರ್ವ್ಹೀಸೂ ಇದೆ. ಇಲ್ಲಿಯ ಬಸ್ಸುಗಳಲ್ಲಿ ೨೫ ಜನರು ಕೂಡ್ರಬಹುದು. ಇದನ್ನು ನಡೆಯಿಸುವವನು ಟ್ರಾಮಿನ ಹಾಗೆ ಗಂಡಸು; ಕಂಡಕ್ಟರ್ ಹೆಂಗಸು. ಟೋಕಿಯೋ ನಗರದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಹೋಗಲು ಬಸ್ಸಿನ ದರವು ೨ ಆಣೆಯಿದೆ. ಬಸ್ಸು ಹೊರಡುವ ಮೊದಲು ಕಂಡಕ್ಟರಳು ಪ್ರಯಾಣಿಕರಿಗೆ "ಇರಷ್ಯ ಮಾಸೇ" (ದಯವಿಟ್ಟು ಒಳಕ್ಕೆ ಬನ್ನಿ) ಎಂದು ಕೇಳಿಕೊಳ್ಳುವಳು. ಪ್ರಯಾಣಿಕರು ಗಾಡಿಯಿಂದ ಇಳಿದು ಹೋಗುವಾಗ 'ಅರಿಗಾತೋ ಗೋಜಾಯಿ ಮಾಸ್ತ' (ಗಾಡಿಯೊಳಕ್ಕೆ ಬಂದುದಕ್ಕಾಗಿ ದೀನತೆಯಿಂದ ವಂದಿಸುವೆ) ಎಂದು ಅವರಿಗೆ ಅರುಹುವಳು. ಈ ರೀತಿ ವಂದಿಸುವದರಲ್ಲಿ ಯಾವ ಭಾಗ್ಯವು ದೊರೆಯದಿದ್ದರೂ, ಪ್ರಯಾಣಿಕರನ್ನು ಅತಿಥಿಗಳಂತೆ ಭಾವಿಸಿ ಗೌರವಿಸುವರು. ಬಸ್ಸು ಹೋಗುತ್ತಿರುವಾಗ ಕಂಡಕ್ಟರಳು ಮುಂದೆ ಬರುವ ನಿಲ್ದಾಣದ ಹೆಸರನ್ನು ಉಚ್ಚರಿಸಿ, ಯಾರಾದರೂ ಇಳಿಯುವವರಿದ್ದರೆ ಬಸ್ಸನ್ನು ನಿಲ್ಲಿಸುವಂತೆ ನಡೆಯಿಸುವವನಿಗೆ ಸೂಚಿಸುವಳು. ನಡುವೆ ಎಲ್ಲಿಯೂ ನಿಲ್ಲಿಸದೆ ನಿರ್ದಿಷ್ಟವಾದ ಸ್ಥಳದಲ್ಲಿ ಮಾತ್ರ ಬಸ್ಸು ನಿಲ್ಲುವದು. ಇಲ್ಲಿಯ ಕಂಡಕ್ಟರುಗಳು ಮೃದುವಚನಗಳಿಂದ ಪ್ರಯಾಣಿಕರೊಡನೆ ವ್ಯವಹರಿಸುವದಕ್ಕಾಗಿ ಒಂದು ಶಿಕ್ಷಣಾಲಯವೆ ಇದೆ. ಅಲ್ಲಿ ಉತ್ತೀರ್ಣರಾದ ಹೆಂಗುಸರನ್ನೇ ಕಂಡಕ್ಟರರೆಂದು ನಿಯಮಿಸಿಕೊಳ್ಳಲಾಗುವದು.

## ಮೋಟಾರುಗಳು (Taxi)

ಜಪಾನಿನ ಮೂಲೆಮೂಲೆಗೂ ಮೋಟಾರುಗಳು ವ್ಯಾಪಿಸಿವೆ. ಸ್ವಂತವಾಗಿಯೂ ಅನೇಕ ಜನರು ಮೋಟಾರುಗಳನ್ನು ಇಟ್ಟಿದ್ದಾರೆ. ಈ ದೇಶದಲ್ಲಿ ಝುಟಕಾ ಅಥವಾ ಟಾಂಗಾಗಳಿಲ್ಲ. ೪–೫ ಮೈಲುಗಳಿಗೆ ೬–೮ ಆಣೆ ಕೊಟ್ಟರೆ, ಮೋಟಾರುಗಳು ಸಿಗುವವು. ಭಾರತದ ಟಾಂಗಾದ ಬಾಡಿಗೆಗಿಂತಲೂ ಮೋಟಾರಿನ ಬಾಡಿಗೆ ಕಡಿಮೆ ಇರುವದು. ಇದಕ್ಕೆ ಪೆಟ್ರೋಲ ಸುಲಭ ದರದಿಂದ ದೊರೆಯುವದೇ ಮುಖ್ಯ ಕಾರಣ. ಪೆಟ್ರೋಲಿನ ದರವು ಗ್ಯಾಲನ್ನಿಗೆ ೬ ಆಣೆಯಿದೆ. ಆರ್ಥಿಕ ಮುಗ್ಗಟ್ಟಿನಿಂದ ಈಗ ೧೦ ಆಣೆಗೆ ಬೆಲೆ ಏರಿದೆ. ಪ್ರತಿಯೊಬ್ಬ ಡ್ರಾಯವರನೂ ಇಂತಿಷ್ಟೇ ಪೆಟ್ರೋಲ ತೆಗೆದುಕೊಳ್ಳಬೇಕೆಂದು ನಿಯಂತ್ರಣವನ್ನೂ ಮಾಡಲಾಗಿದೆ.

ಟೋಕಿಯೋ ನಿಲ್ದಾಣವನ್ನು ಬಿಟ್ಟರೆ ಮತ್ತೆಲ್ಲಿಯೂ ಮೋಟಾರುಗಳು ಪ್ರಯಾಣಿಕರಿಗಾಗಿ ಕಾಯುವದಿಲ್ಲ. ರಸ್ತೆಯಲ್ಲಿ ಮೋಟಾರುಗಳು ತಿರುಗುತ್ತಿರುತ್ತವೆ. ಅವುಗಳನ್ನು ಕರೆದು ಹತ್ತಬಹುದು. ಅಲ್ಲಿ ಬಾಡಿಗೆಯನ್ನು ಗೊತ್ತುಪಡಿಸುವ ಕಾರಣವಿಲ್ಲ. ಅದರಲ್ಲಿರುವ ಮೀಟರ ಎಷ್ಟು ದುಡ್ಡು ತೋರಿಸುವದೋ ಅಷ್ಟನ್ನು ಕೊಟ್ಟರೆ ತೀರಿತು. ಡ್ರಾಯವರರು ಅತ್ಯಂತ ಬುದ್ಧಿಶಾಲಿಗಳೂ ವಿದ್ಯಾವಂತರೂ ಇರುತ್ತಾರೆ. ಅವರಿಂದ ಎಲ್ಲ ವರ್ತಮಾನವನ್ನೂ ಕೇಳಿ ತಿಳಿದುಕೊಳ್ಳಬಹುದು. ನಾನು ಮುಂದೆ ನೀನು ಮುಂದೆ ಎಂದು ಮೋಟಾರುಗಳ ಸ್ಪರ್ಧೆಯು ಎಂದೂ ನಡೆಯುವದಿಲ್ಲ.

ಪರದೇಶಿಯರು ಪ್ರಯಾಣಮಾಡುವಾಗ ಇಂಗ್ಲಿಷಿನಲ್ಲಿಯೂ ಬೇರೆ ಯಾವ ಯುರೋಪಿನ ಭಾಷೆಗಳಲ್ಲಿಯೂ ಮಾತನಾಡಿದರೆ ಅವುಗಳನ್ನು ತಿಳಿದುಕೊಳ್ಳುವ ಬಹುಜನ ಡ್ರಾಯುವರರು ಇರುವರು. ಜಪಾನ ರಾಷ್ಟ್ರದ ವಿಷಯವಾಗಿ ಪ್ರತಿಯೊಬ್ಬನಿಗೂ ಅತ್ಯಂತ ಅಭಿಮಾನವಿರುತ್ತದೆ. ಪ್ರವಾಸಿಕರು ಜಪಾನದ ವಿಷಯವಾಗಿ ಏನಾದರೂ ಅಪಪ್ರಚಾರ ಮಾಡುತ್ತಿದ್ದರೆ, ಡ್ರಾಯುವರನು ಕೂಡಲೆ ಪೋಲಿಸರಿಗೆ ತಿಳಿಸುವದು ತನ್ನ ಕರ್ತವ್ಯವೆಂದು ತಿಳಿಯುವನು; ಮತ್ತು ತಿಳಿಸುವನು. ಒಮ್ಮೆ ರೇಲ್ವೆಯಲ್ಲಿ ಇಬ್ಬರು ಜಪಾನಿ ಪ್ರಯಾಣಿಕರು, ಚೀನಾ-ಜಪಾನ ಯುದ್ಧದ ವಿಷಯವಾಗಿ

ಹೆಚ್ಚು ಮಾತಾಡುತ್ತಿದ್ದುದನ್ನು ಕಂಡು ಒಬ್ಬ ತರುಣಿಯು ಪೋಲಿಸರಿಗೆ ತಿಳಿಸಲು ಅವರಿಬ್ಬರೂ ಬಂಧಿಸಲ್ಪಟ್ಟು ಶಿಕ್ಷಿಸಲ್ಪಟ್ಟಿದ್ದಾರೆ.

ಸ್ವಂತವಾಗಿ ಮೋಟಾರು ನಡಿಸುವಾಗಲೂ ಕೂಡ ಹೆಣ್ಣುಮಕ್ಕಳು ಹತ್ತರ ಕೂಡಬಾರದೆಂಬ ನಿರ್ಬಂಧವಿದೆ. ಕುಳ್ಳಿರಿಸಿಕೊಂಡರೆ, ಶಿಕ್ಷೆಯು ವಿಧಿಸಲ್ಪಡುವದು. ೧೯೩೫ರಲ್ಲಿ ೧,೭೫,೯೦೪ ಮೋಟಾರುಗಳು ಇದ್ದವು. ಇವುಗಳಲ್ಲಿ ಬಾಡಿಗೆಯ ಮೋಟಾರುಗಳು ೬೪,೭೮೫.

## ರಿಕ್ಷಾ (Riksha)

ಇದೊಂದು ಬಗೆಯ ಗಾಡಿಯು. ಮನುಷ್ಯರನ್ನು ಕುಳ್ಳಿರಿಸಿಕೊಂಡು ಮನುಷ್ಯರು ಎಳೆಯುವದು. ಮೊದಲಿನ ಕಾಲದಲ್ಲಿ ಇವು ಹೆಚ್ಚಾಗಿದ್ದವು. ಮೋಟಾರುಗಳು ಆದಂದಿನಿಂದ ಇವು ಕಡಿಮೆಯಾಗಿವೆ. ನಾಗರಿಕರಲ್ಲಿ ಇಂಥ ಗಾಡಿಗಳಲ್ಲಿ ಕೂಡುವದೂ, ಈ ಪದ್ಧತಿಯೂ ಅಪಮಾನಕರವೆಂದು ತಿಳಿಯಲ್ಪಡುತ್ತವೆ. ದೊಡ್ಡದೊಡ್ಡ ವೇಶ್ಯೆಯರು ಮಾತ್ರ ಇವುಗಳಲ್ಲಿ ಹೆಚ್ಚಾಗಿ ಕೂಡುತ್ತಾರೆ. ಅದೂ ಕಡಿಮೆಯಾಗತೊಡಗಿದೆ. ಪರದೇಶದ ಪ್ರವಾಸಿಗಳು ಅನುಭವ ತೆಗೆದುಕೊಳ್ಳುವದಕ್ಕಾಗಿ ಒಮ್ಮೆ ಕೂಡುವ ವಾಡಿಕೆಯುಂಟು.

## ಬೈಸಿಕಲ್

ಜಗತ್ತಿನಲ್ಲಿ ಹೆಚ್ಚು ಸಾಯಕಲ್‌ಗಳನ್ನು ಉಪಯೋಗಿಸುವವರು ಜಪಾನಿಯರೇ. ಈ ದೇಶದ ಹಳ್ಳಿಗಾಡಿನಲ್ಲಿ ದೊಡ್ಡದೊಡ್ಡ ರಸ್ತೆಗಳು ಇಲ್ಲಗದ್ದರಿಂದ ಚಿಕ್ಕಚಿಕ್ಕ ರಸ್ತೆಗಳಲ್ಲಿ ಬೈಸಿಕಲ್ಲಿನ ಮೂಲಕ ಪ್ರಯಾಣಮಾಡುತ್ತಾರೆ. ರೈತರು ನಮ್ಮಲ್ಲಿ ಎತ್ತುಗಾಡಿಗಳನ್ನು ಉಪಯೋಗಿಸುವಂತೆ ಅಲ್ಲಿ ಸೈಕಲ್ಲುಗಳನ್ನು ಉಪಯೋಗಿಸುತ್ತಾರೆ. ಮೂರು ಗಾಲಿಗಳ ಸೈಕಲ್ಲಿನ ಮೇಲೆ, ರೈತನು ತನ್ನ ಪ್ರಪಂಚವನ್ನೇ ಸಾಗಿಸುವನು. ಹೀಗೆ ಸಾಯಕಲ್ಲು ಕೇವಲ ಮೋಜಿನ ಸಾಧನವಿರದೆ ಜೀವನದ ಸಾಧನವಾಗಿದೆ. ಪ್ರತಿಯೊಬ್ಬ ಹೆಣ್ಣುಮಗಳೂ ಸಾಯಕಲ್ಲಿನ ಸವಾರಿಮಾಡುತ್ತಾಳೆ. ರೈತರು ಹೊಲ ಗದ್ದೆಗಳಿಂದ ಬರುವಾಗ ಒಂದೇ ಸಾಯಕಲ್ಲಿನ ಮೇಲೆ ಪತಿ-ಪತ್ನಿಯರೂ

ಸಾಯಕಲ್ಲ ಸ್ವಾರರಾಗಿ ಬರುವ ಸುಂದರವಾದ ದೃಶ್ಯವನ್ನು ದಿನಾಲು ನೋಡಬಹುದು. ಟೋಕಿಯೋ ಮೊದಲಾದ ದೊಡ್ಡ ಪಟ್ಟಣಗಳಲ್ಲಿ ಕೂಲಿಯವರು ಮಾತ್ರ ಬೈಸಿಕಲ್ಲನ್ನು ಉಪಯೋಗಿಸುತ್ತಾರೆ. ಬೀದಿಗಳಲ್ಲಿ ಸಾಯಕಲ್ಲುಗಳ ತಾಕಲಾಟಗಳು ಆಗುವದುಂಟು. ಆದರೆ ಯಾರೂ ಜಗಳಕ್ಕೆ ಸಿದ್ಧರಾಗುವದಿಲ್ಲ. ಇಬ್ಬರೂ ಇಳಿದು "ದೊಮೊ ಸುಮಿಮಾಸೇನ್" (ಏನೋ ತಪ್ಪಿ ಉಂಟಾಯಿತು, ಕ್ಷಮಿಸಬೇಕು) ಎಂದು ಇಬ್ಬರೂ ಕೇಳಿಕೊಂಡು ಮುಂದೆ ಹೊರಡುತ್ತಾರೆ. ಮೂರು ವರ್ಷಗಳಲ್ಲಿ ಇಬ್ಬರು ಜಗಳವಾಡಿದ್ದನ್ನು ಈ ಲೇಖಕನು ನೋಡಿಯೇ ಇಲ್ಲ. ಇದು ಅತಿಶಯೋಕ್ತಿಯಲ್ಲ. ಎಷ್ಟೋ ಭಾರತೀಯರು ಇದೇ ಅಭಿಪ್ರಾಯವನ್ನು ಇಟ್ಟುಕೊಂಡಿರುವರು. ಒಬ್ಬರನ್ನೊಬ್ಬರು ಸಿಟ್ಟಿಗೆದ್ದು ಬಯ್ಯುವದು ಇಲ್ಲವೇ ಇಲ್ಲ. ಬಹಳವಾದರೆ ಮಂಕನೆನ್ನುವರು. ಈ ವಿಷಯವನ್ನು ತಿಳಿದುಕೊಂಡು ಮೈಸೂರಿನ ರಾಜಶಾಸ್ತ್ರಪ್ರವೀಣರಾದ ಡಾ. ಎನ್. ಎಸ್. ಸುಬ್ಬರಾಯರು ಆಶ್ಚರ್ಯಪಟ್ಟರು.

## ವಿಮಾನಗಳು

ಸಾರ್ವಜನಿಕ ಸಹಾಯಕ್ಕೆಂದು ವಿಮಾನ ಪ್ರಯಾಣದ ಪ್ರಯತ್ನಗಳು ನಡೆದಿವೆ. ಟೋಕಿಯೋದಿಂದ ಓಸಾಕಾಕ್ಕೂ ಮತ್ತು ಇನ್ನಿತರ ಸ್ಥಳಗಳಿಗೂ ವಿಮಾನದಲ್ಲಿ ಹೋಗಲು ಅವಕಾಶವಿದೆ. ಸರಕಾರದವರು ಪ್ರತಿವರ್ಷ ಸಾರ್ವಜನಿಕ ಕಂಪನಿಗಳಿಗೆ, ೫ ಲಕ್ಷ ಎನ್ನುಗಳವರೆಗೆ ಸಹಾಯ ಮಾಡುತ್ತಲಿದ್ದಾರೆ. ಪರದೇಶಗಳ ಪ್ರಯಾಣವು ಇನ್ನೂ ನಡೆದಿಲ್ಲ. ಟಪಾಲು ಕೂಡ ನೇರವಾಗಿ ಜಪಾನಿಗೆ ಬರುವದಿಲ್ಲ. ಜಪಾನದ ಟಪಾಲು ಮೊದಲು ಷಾಂಗಾಯಿಯವರಗೆ ಹಡಗದಲ್ಲಿ ಹೋಗಿ ಮುಂದೆ ನಿರ್ದಿಷ್ಟವಾದ ಸ್ಥಳಗಳಿಗೆ ಹೋಗುತ್ತದೆ. ಈಚೆಗೆ ವಿಮಾನಗಳನ್ನು ಕಟ್ಟುವ ಅನೇಕ ಶಾಲೆಗಳು ತೆರೆಯಲ್ಪಟ್ಟಿವೆ. ಜಪಾನವು ಇನ್ನೂ ಈ ಉದ್ಯಮದಲ್ಲಿ ಮುಂದುವರಿದಿಲ್ಲ.

ವಿಮಾನಗಳ ವಿಷಯದಲ್ಲಿ ಜಪಾನದಲ್ಲಿ ಪ್ರಯತ್ನಗಳು ಪ್ರಾರಂಭವಾಗಿದ್ದರೂ ಪಾಶ್ಚಾತ್ಯ ರಾಷ್ಟ್ರಗಳಷ್ಟು ಮುಂದುವರಿದಿಲ್ಲ. ಅದರ ಪ್ರಗತಿಯೂ

ತಿಳಿಯುವಂತಿಲ್ಲ, ಇನ್ನು ೧೦-೮ ವರುಷಗಳಲ್ಲಿ ಈ ವಿಷಯದಲ್ಲಿಯೂ ಜಪಾನವು ವಿಲಕ್ಷಣ ಪ್ರಗತಿಯನ್ನು ಹೊಂದಬಹುದು.

## ಸಮುದ್ರಯಾನ

ಇಂದು ಜಗತ್ತಿನಲ್ಲಿ ಜಪಾನ್ ದೇಶವು ಸಮುದ್ರದಲ್ಲಿ ನಿರ್ಭಯವಾಗಿ ವ್ಯಾಪಾರವನ್ನು ಸಾಗಿಸುವದರಲ್ಲಿ ೩ನೇ ರಾಷ್ಟ್ರವಾಗಿದೆ. ೧೯೩೬ರಲ್ಲಿ ಅಪ್ಪರ ಭಾಗದಲ್ಲಿ ೫೦ ಲಕ್ಷ ಟನ್ ತೂಕವುಳ್ಳ ಹಡಗುಗಳನ್ನು ಕಟ್ಟಿಕೊಂಡು ವ್ಯಾಪಾರ ಸಾಗಿಸುತ್ತಿದ್ದಿತು. ಸ್ವತಂತ್ರವಾದ ಸ್ವಂತ ಹಡಗುಗಳಿಲ್ಲದೆ ವ್ಯಾಪಾರವು ಸಾಧ್ಯವಿಲ್ಲೆಂಬುದನ್ನು ಪಾಶ್ಚಾತ್ಯರಿಂದ ಮನಗಂಡು, ಹಡಗುಗಳನ್ನು ಕಟ್ಟುವ ಹೋರೆಯನ್ನು ಕೈಕೊಂಡದ್ದರಿಂದ ಜಗತ್ತಿನ ಪ್ರತಿಯೊಂದು ಬಂದರದೊಡನೆಯೂ ವ್ಯಾಪಾರ ಮಾಡಲು ಜಪಾನವು ಸಮರ್ಥವಾಗಿದೆ. ಇಷ್ಟೇ ಅಲ್ಲದೆ, ತನ್ನ ಒಡವೆಗಳನ್ನು ಜಗತ್ತಿನಲ್ಲೆಲ್ಲ ಕಡಿಮೆ ದರದಿಂದ ಹರಡಲು, ಒಳ್ಳೇ ಸಹಾಯವಾಗಿದೆ.

ಇಂದಿನ ಅಂತರ್‌ರಾಷ್ಟ್ರೀಯ ವ್ಯಾಪಾರದಲ್ಲಿ ಜಪಾನವು ೧೦೦ಕ್ಕೆ ೩೫ರಷ್ಟು ಕ್ಷೇತ್ರವನ್ನು ವ್ಯಾಪಿಸಿದೆ. ಇದೆಲ್ಲಕ್ಕೂ ಸ್ವಂತ ಹಡಗುಗಳೇ ಕಾರಣವು. ಭಾರತವು ಜಪಾನಿನ ಎಂಟರಷ್ಟು ದೊಡ್ಡದಿದ್ದರೂ ಆರ್ಥಿಕ ಸ್ಥಿತಿಯು ಉತ್ತಮವಿದ್ದರೂ ಅಂತರ್‌ರಾಷ್ಟ್ರೀಯ ವ್ಯಾಪಾರದಲ್ಲಿ ೩.೫ ಮಾತ್ರ ಹಿಂದುಸ್ತಾನದ್ದಿದೆ. ಇಷ್ಟು ಗಳಿಸಬೇಕಾದರೂ ಭಾರತಕ್ಕೆ ೧೦೦ ವರುಷಗಳು ಹಿಡಿದಿವೆ. ಜಪಾನಿನ ಹಡಗುಗಳ ಉದ್ಯಮವು ಪ್ರತಿವರ್ಷ ಬೆಳೆಯುತ್ತಲೇ ನಡೆದು ವ್ಯಾಪಾರದ ಉನ್ನತಿಗೆ ಕಾರಣವಾಗಿದೆ. ಈ ಉದ್ಯಮದಲ್ಲಿ ಜಪಾನವು ಇಷ್ಟು ಮುಂದರಿಯಲು, ಜಪಾನದ ಸ್ವಾಭಾವಿಕವಾದ ಪ್ರಕೃತಿ, ಸರಕಾರದ ಸಹಾಯಗಳೇ ಮುಖ್ಯ ಕಾರಣ.

ಜಪಾನಿನ ಚರಿತ್ರೆಯು ಸಮುದ್ರದ ಉದ್ಯಮದೊಡನೆಯೇ (Maritime-activities) ಬೆಳೆದು ಬಂದಿದೆ. ಇವರ ಪುರಾಣಗಳಲ್ಲಿ ಸಮುದ್ರವೀರರ ಕಥೆಗಳು ತುಂಬಿವೆ. ೧೫ ನೇ ಶತಮಾನದಲ್ಲಿ ಜಪಾನಿಯರು ದೊಡ್ಡದೊಡ್ಡ ಹಡಗಗಳನ್ನು ಕಟ್ಟಿಕೊಂಡು, ಸಿಯಾಂ, ಇಂಡಿಯಾ, ಆಫ್ರಿಕಾ

ದೇಶಗಳ ಸಂಗಡ ವ್ಯಾಪಾರ ಮಾಡುತ್ತಿದ್ದರೆಂದು, ಇತಿಹಾಸದಲ್ಲಿ ಕಾಣು ವದು. ಪೋರ್ತಗೀಜರ ಸಂಬಂಧವು ಬಂಗಪೋಲಂತೂ ಅವರಂತೆಯೇ ದೊಡ್ಡ ದೊಡ್ಡ ಹಡಗಗಳನ್ನು ಕಟ್ಟಹತ್ತಿದರು. ಈ ರೀತಿ ವ್ಯಾಪಾರದಲ್ಲಿ ಜಪಾನವು ಮುಂದರಿಯುತ್ತಿರಲು, ೧೬೩೯ ರಲ್ಲಿ ತೋಕುಗಾವ ಸರ್ವಾಧಿಕಾರಿಯು ಪರದೇಶಿಯರ ಮೇಲೆ ಸಂಶಯುಗೊಂಡು ಸಮುದ್ರಪರ್ಯಟನವನ್ನೇ ತಡೆ ದನು. ಈ ರೀತಿಯಾಗಿ ಎರಡುವರೆ ಶತಮಾನಗಳವರೆಗೆ, ಜಪಾನಿಯರ ಸಮುದ್ರ ವ್ಯಾಪಾರವು ಕಟ್ಟಾಯಿತು.

ಆದರೆ ೧.೮೫೮ ರಲ್ಲಿ ಅಮೇರಿಕೆಯ ಫೇರಿಯು ಜಪಾನದಲ್ಲಿ ವ್ಯಾಪಾ ರಕ್ಕಾಗಿ ಒಂದು ಬಂದರವನ್ನು ತೆರೆಯಲೇಬೇಕೆಂದು ಹಟಹಿಡಿದದ್ದರಿಂದ ಜಪಾನ ಸರಕಾರವು ನಿರ್ವಾಹವಿಲ್ಲದೆ, ಅಪ್ಪಣೆಯನ್ನು ಕೊಟ್ಟಿತು. ಇವ ರೊಡನೆಯೇ ಜಪಾನದ ಸಮುದ್ರದ ವ್ಯಾಪಾರವೂ ಮತ್ತೆ ಪ್ರಾರಂಭವಾ ಯಿತು. ಸರಕಾರವು ಇದಕ್ಕೆ ಅನುಮತಿಯನ್ನು ಕೊಟ್ಟದ್ದಲ್ಲದೆ, ಸಹಾಯ ವನ್ನು ಮಾಡಲೂ ಮುಂದರಿಯಿತು. ಯಾಕೋಹಾಮಾದಲ್ಲಿ ಹಡಗಗ ಳನ್ನು ಕಟ್ಟುವದನ್ನು ಪ್ರಾರಂಭಿಸಿದ್ದಲ್ಲದೆ, ಅದರ ವಿಷಯುವಾಗಿ ನಾಗಾಸಾಕಿ ಯಲ್ಲಿ ಒಂದು ಶಾಲೆಯೂ ತೆರೆಯಲ್ಪಟ್ಟಿತು. ೧.೮೭೧ರಲ್ಲಿ ಮೇಜಿ ಚಕ್ರವರ್ತಿ ಗಳ ಆಳಿಕೆಯಲ್ಲಿ ಹಡಗಗಳ ವ್ಯಾಪಾರಕ್ಕಾಗಿ ಹೊಸ ಕಾಯದೆಗಳು ರೂಪ ಗೊಂಡವು. ಎಲ್ಲಕ್ಕೂ ಮೊದಲು ಟೋಕಿಯೋದಿಂದ ಯಾಕೋಹಾಮಾಕ್ಕೆ ಜನರ ಪ್ರವಾಸಕ್ಕಾಗಿ ಉಗಿಹಡಗವು ಪ್ರಾರಂಭವಾಯಿತು. ಮುಂದೆ ಇಡೀ ದೇಶದಲ್ಲೆಲ್ಲ ಸಂಚಾರಕ್ಕೆ ಹಡಗಗಳ ಉಪಯೋಗವು ಆಗಹತ್ತಿತು.

೧೮೮೫ರಲ್ಲಿ ಎನ್. ವೈ. ಕೆ. ಉಗಿಹಡಗ ಕಂಪನಿಯು ಉದಯ ವಾಯಿತು. ಅದರ ಬಂಡವಲವು ೧ ಕೋಟಿ ೩೦ ಲಕ್ಷ ಎನ್ನುಗಳಿದ್ದಿತು. ಅದು ಒಂದು ವರ್ಷದಲ್ಲಿ ೬೩ ಸಾವಿರ ಟನ್‌ತೂಕದ ೫೮ ಉಗಿ ಹಡಗಗಳನ್ನು ನಿರ್ಮಿಸಿತು. ೧೮೯೩ರಲ್ಲಿ ಎನ್. ವೈ. ಕೆ. ಕಂಪನಿಯು ಭಾರತದೊಡನೆ ವ್ಯಾಪಾರವನ್ನು ಪ್ರಾರಂಭಿಸಿತು. ಈ ರೀತಿಯಾಗಿ ದೂರ ದೇಶಗಳೊಡನೆ ಸಂಬಂಧವನ್ನು ಬೆಳೆಯಿಸಿದ್ದು ಆಧುನಿಕ ಕಾಲದಲ್ಲಿ ಇದೇ ಮೊದಲು. ೧೯೦೪-೫ರಲ್ಲಿ ಚೀನಾ-ಜಪಾನಿನ ಯುದ್ಧದಲ್ಲಿ ಸೈನ್ಯವನೂ

ಸರಕುಗಳನ್ನೂ ಸಾಗಿಸುವದಕ್ಕಾಗಿ ಎನ್. ವೈ. ಕೆ. ಕಂಪನಿಯು ಅನೇಕ ಹಡಗಗಳನ್ನು ಕೊಂಡಿತು. ಯುದ್ಧದ ನಂತರ ನೋಡಲಾಗಿ ಹಡಗಗಳು ಎರಡು ಪಟ್ಟು ಆದ್ದರಿಂದ ಜಪಾನ-ಲಂಡನ, ಜಪಾನ-ಮನಿಲಾ, ಜಪಾನ-ಸನ್‌ಫ್ರಾನ್ಸಿಸ್ಕೋಗಳೊಡನೆ ಮೂರು ಮಾರ್ಗಗಳಿಂದ ವ್ಯಾಪಾರವು ಪ್ರಾರಂಭಿಸಲ್ಪಟ್ಟಿತು. ಇದೇ ಸಮಯದಲ್ಲಿ ಸ್ಥಾಪಿತವಾದ ಓ. ಎಸ್. ಕೆ. ಸ್ಟೀಮ ಕಂಪನಿಯೂ ಪರದೇಶಗಳೊಡನೆ ಒಳ್ಳೇ ಜೋರಿನಿಂದ ವ್ಯಾಪಾರ ವನ್ನು ಪ್ರಾರಂಭಿಸಿತ್ತು. ೧೮೯೮ರಲ್ಲಿ ಈ ಎರಡೂ ಕಂಪನಿಗಳು ಒಟ್ಟು ೫ ಲಕ್ಷ ಟನ್ ತೂಕವುಳ್ಳ ನೂರಾರು ಹಡಗುಗಳನ್ನು ನಿರ್ಮಿಸಿದ್ದವು.

ಜಪಾನಿನ ವ್ಯಾಪಾರದ ಪ್ರಗತಿಗೆ ಪರದೇಶಿಯರೇ ಕಾರಣರು. ಎನ್. ವೈ. ಕೆ. ಕಂಪನಿಯು ಪ್ರಾರಂಭವಾದಾಗ ಮೊದಮೊದಲು ಪರದೇಶೀಯ ತಜ್ಞರು ಬಂದು ಹಡಗಗಳನ್ನು ಕಟ್ಟುವ ವಿಷಯದಲ್ಲಿ ಶಿಕ್ಷಣವನ್ನು ಕೊಡು ತ್ತಿದ್ದರು. ೧೮೯೫ರಲ್ಲಿ ಇವರ ಸಂಖ್ಯೆಯು ೨೫೦ ಇದ್ದಿತು. ಜಪಾನಿಯರು ತಜ್ಞರಾದಂತೆ, ಪರದೇಶಿಯರ ಆಶ್ರಯವನ್ನು ಕಡಿಮೆ ಮಾಡಿದರು. ೧೯೨೦ ರಲ್ಲಿ ಜಪಾನಿಯರಿಂದಲೇ ಕಾರ್ಯವು ನಡಿಸಲ್ಪಡಹತ್ತಿತು. ೧೯೧೮ ರಲ್ಲಿ ಜಪಾನಿನ ವ್ಯಾಪಾರದ ನೂರಕ್ಕೆ ೮೦ರಷ್ಟು ದೇಶೀ ಹಡಗಗಳಿಂದಲೇ ನಡೆ ಯಿತು. ಇದೇ ಸಮಯದಲ್ಲಿ ಎನ್. ವೈ. ಕೆ. ಕಂಪನಿಯು ಪ್ರಪಂಚದ ಹಡಗು ಕಂಪನಿಗಳಿಗಿಂತಲೂ ದೊಡ್ಡ ಕಂಪನಿಯ ರೂಪವನ್ನು ತಾಳಿತು.

ಕಳೆದ ನಾಲ್ಕಾರು ವರುಷಗಳಿಂದ ಹಡಗಗಳ ವ್ಯಾಪಾರವು ಭರದಿಂದ ಬೆಳೆಯುತ್ತ ನಡೆದಿದೆ. ಚಿನ್ನದ ನಾಣ್ಯದ ಪದ್ಧತಿಯು (Gold exchange) ತಡೆಮಾಡಿದ್ದರಿಂದಲೂ ಎನ್ ನಾಣ್ಯದ ಬೆಲೆಯು ತಗ್ಗಿದ್ದರಿಂದಲೂ ರಫ್ತಿನ ವ್ಯಾಪಾರವು ಹೆಚ್ಚಿದ್ದರಿಂದಲೂ ವ್ಯಾಪಾರಕ್ಕೆ ಕಳೆಯೇರಲು ಕಾರಣವಾ ಯಿತು. ಎನ್ನುಗಳ ನಾಣ್ಯದ ಬೆಲೆಯು ಏರುವ ವರೆಗೆ, ರಫ್ತಿನ ವ್ಯಾಪಾ ರವು ಲಾಭದಾಯಕವೇ. ಪ್ರತಿವರ್ಷ ಮೂವತ್ತು ಕೋಟಿ ಎನ್ನುಗಳ ಹೆಚ್ಚು ಲಾಭವನ್ನು ಪಡೆಯುವದರಿಂದ ಬ್ಯಾಲೆನ್ಸ ಆಫ್ ಪೇಮೆಂಟ್ಸಗೆ ಹೆಚ್ಚು ಸಹಾಯವಾಗಿ ದೇಶದ ಆರ್ಥಿಕ ಸ್ಥಿತಿಯ ಭದ್ರತೆಗೆ ಸಹಾಯ

ಮಾಡುತ್ತಲಿದೆ. ಜಪಾನ ಸರಕಾರವು ಮೊದಲಿನಿಂದ ಇಲ್ಲಿಯ ವರೆಗೂ ಹಡಗಗಳ ಪ್ರಗತಿಗಾಗಿ ಹತ್ತು-ಲಕ್ಷ ಎನ್ನುಗಳನ್ನು ಸಹಾಯಕ ಧನವೆಂದು ಕೊಡುತ್ತ ಬಂದಿದೆ.

---

# ಸುದ್ದಿಯ ಮಾರ್ಗಗಳು



## ಅಂಚೆ

ಹಿಂದಿನ ಕಾಲದಲ್ಲಿ ಜಪಾನಿನ ಏಕಾಂತವಾಸದಿಂದ ಅಂಚೆಯ ಸಂಚಾರವು ಅಷ್ಟು ಸಮರ್ಪಕವಾಗಿ ಸಾಗುತ್ತಿರಲಿಲ್ಲ. ೬೪೭ರಲ್ಲಿ ಮೊದಲನೆಯ ಸಲ ತೋೕತೋೕಕು ಚಕ್ರವರ್ತಿಗಳು ಚೀನಾದೇಶದ ಪದ್ಧತಿಯನ್ನನುಸರಿಸಿ ಅಂಚೆಯನ್ನು ಸ್ಥಾಪಿಸಿದರು. ಕುದುರೆ ಸವಾರರಿಂದ ಟಪಾಲು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಒಯ್ಯಲ್ಪಡುತ್ತಿತ್ತು. ಹೀಗಿರುವಲ್ಲಿ ಪಾಳಿಯಗಾರರ ಉಪಟಳವು ಹೆಚ್ಚಾಗಲು, ಎಲ್ಲ ವಿಷಯಗಳನ್ನು ಗುಟ್ಟಾಗಿ ಇಡಲು ಅಂಚೆಯ ಪದ್ಧತಿಯು ಬಹು ಕಠಿಣ ಸ್ಥಿತಿಯನ್ನೈದಿತು. ನೂರು ವರುಷಗಳ ಹಿಂದೆ ಕಿಯೋೕಕೋೕದಿಂದ ಟೋೕಕಿಯೋೕ ಪಟ್ಟಣಕ್ಕೆ ಒಂದು ಕಾಗದವು ತಲಪಲು ನಾಲ್ಕು ರೋೕಯೋೕ (೩-೮-೦) ಹಿಡಿಯುತ್ತಿದ್ದಿತು; ಈಗ ಮೂರು ಕಾಸು ಹಿಡಿಯುತ್ತದೆ.

ಹೊಸ ಸರಕಾರದಿಂದ ೧೮೭೧ರಲ್ಲಿ ಹೊಸ ಪದ್ಧತಿಯ ಅಂಚೆಯ ಖಾತೆಯು ಸ್ಥಾಪಿಸಲ್ಪಟ್ಟಿತು. ಇದೇ ಹೊತ್ತಿಗೆ ಅಂಚೆಯ ಟಿಕಿಟುಗಳು ಉದಯವಾದವು. ೧೮೭೭ರಲ್ಲಿ ಜಪಾನವೂ ಅಂತರ್‌ರಾಷ್ಟ್ರೀಯ ಅಂಚೆಯ ಸಂಘಕ್ಕೆ ಸೇರಿಸಲ್ಪಟ್ಟಿತು. ಅಂದಿನಿಂದ ಪರದೇಶದ ಟಪಾಲನ್ನು ಕಳಿಸಲು ಅವಕಾಶವಾಯಿತು. ೧೯೩೬ರ ಕೊನೆಗೆ, ಜಪಾನದಲ್ಲಿ ೧೩೫೭೧ ಅಂಚೆಯ ಚಾವಡಿಗಳಿದ್ದವು. ಒಟ್ಟು ೪,೯೬,೬೫,೪೦,೫೧೩ ರಷ್ಟು ಕಾಗದಪತ್ರಗಳು ಹಾಕಲ್ಪಟ್ಟವು. ಒಂದು ವರುಷದಲ್ಲಿ ಅಂಚೆಗೆ ಬೀಳುವ ಕಾಗದಪತ್ರಗಳನ್ನು ಜನಸಂಖ್ಯೆಯ ಮಾನದಿಂದ ವಿಭಾಗಿಸಿದರೆ ಸರಾಸರಿ ತಲೆಯೊಂದಕ್ಕೆ ೯೬ ಪತ್ರಗಳು ಬೀಳುವವು; ಆದರೆ ಗ್ರೇಟಬ್ರಿಟನ್‌ದಲ್ಲಿ ೧೩೧, ಜರ್ಮನಿಯಲ್ಲಿ ೧೦೪, ಫ್ರಾನ್ಸದಲ್ಲಿ ೧೫೫ ರಂತೆ ಪ್ರತಿ ತಲೆಗೆ ಪತ್ರಗಳ ಪ್ರಮಾಣವು ಬೀಳುತ್ತದೆ.

ಇಂದಿನ ಜಪಾನದಲ್ಲಿ ದೇಶದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಪತ್ರ ಮುಟ್ಟಲು ೪ ಕಾಸುವೆಚ್ಚವಾಗುತ್ತದೆ. ಒಂದು ಕಾರ್ಡಿನ ಬೆಲೆಯು ೨ತ್ತಿ ಕಾಸಿದೆ. ಪರದೇಶಗಳಿಗೆ ಕಳಿಸುವದಕ್ಕೆ ೩ ಆಣೆ ಬೀಳುವದು. ( ಕಳೆದ ವರುಷದ ವರೆಗೆ ೧ತ್ತಿ ಆಣೆಇದ್ದಿತು. ) ಮುಂಜಾನೆ ೮॥ ಗಂಟೆಯಿಂದ ರಾತ್ರಿ ೮ ಗಂಟೆಯ ವರೆಗೆ, ೨ ಆಣೆಯ ಟಿಕಿಟು ಹೆಚ್ಚಿಗೆ ಹಚ್ಚಿದರೆ "ಷೋಕು ತಾತ್ಸು" (Express delivery)) ಮೂಲಕ ಪತ್ರ ಹಾಕಿದ ಹೊತ್ತಿನಿಂದ ೩ ಗಂಟೆಯೊಳಗಾಗಿ ಆಯಾ ವಿಳಾಸದಾರರಿಗೆ ಮುಟ್ಟಿಸುವ ವ್ಯವಸ್ಥೆ ದೊಡ್ಡ ಪಟ್ಟಣಗಳಲ್ಲಿ ಮಾತ್ರ ಇದೆ. ಆದರಿಂದ ಅನೇಕರ ಟೆಲಿಗ್ರಾಮಿನ ವೆಚ್ಚವನ್ನುಳಿಸಿದೆ. ಇಷ್ಟು ಕಡಿಮೆ ದರದಲ್ಲಿ ಇಲ್ಲಿಯ ಕಾಗದ ಪತ್ರಗಳು ಅಂಚೆಯಿಂದ ಕಳಿಸಲು ಸಾಧ್ಯವಾದುದು ಅಂಚೆ ಖಾತೆಯ ವೆಚ್ಚವು ಕಡಿಮೆಯಿರುವದೇ ಕಾರಣವೆನಬಹುದು.

**ತಂತಿ:**

ಎಲ್ಲಕ್ಕೂ ಮೊದಲು ೧೮೬೯ರಲ್ಲಿ ಯಾಕೋಹಾಮಾದಿಂದ ಟೋಕಿಯೊ ನಗರಕ್ಕೆ ತಂತಿಯನ್ನು ಏರ್ಪಡಿಸಲಾಯಿತು. ಮೊದಲನೇ ವರ್ಷ ಕೇವಲ ೩೪೮ ತಂತಿಗಳು ಮಾತ್ರ ಕಳಿಸಲ್ಪಟ್ಟವು. ಮೂರನೇ ವರುಷ ಈ ಸಂಖ್ಯೆಯು ೧೯೪೪೮ ರ ವರೆಗೆ ಬೆಳೆಯಿತು. ಆದರೆ ಇಂದು ಅದು ಏಳು ಕೋಟಿಯ ವರೆಗೆ ಬಂದು ಮುಟ್ಟಿದೆ.

ಮೊದಮೊದಲು ತಾರಾಯಂತ್ರದ ಕಂಬಗಳನ್ನು ದೇಶದಲ್ಲಿ ನೆಡುವಾಗ ಜನರು ಅಜ್ಞಾನದಿಂದ ವಿರೋಧಿಸಹತ್ತಿದರು. ಇದೇನೋ ಮಾಯಾ-ಬಝಾರ (Magic) ಎಂದು ಜನರ ತಪ್ಪುಕಲ್ಪನೆಯಾಯಿತು. ಕಂಬಗಳನ್ನು ಹೂಳಬಂದವರನ್ನು ಹಿಂಸಿಸಹತ್ತಿದರು. ಸಾಮಾನುಗಳನ್ನು ಕೆಡಿಸಹತ್ತಿದರು. ಆದರೆ ಸರಕಾರವು ಯೋಗ್ಯ ಮಾರ್ಗದಿಂದ ಜನರಲ್ಲಿ ತಿಳುವಳಿಕೆಯನ್ನು ಹರಡಿದ ನಂತರ ಈ ವಿರೋಧವು ಕಡಿಮೆಯಾಯಿತು. ಇಂದು ೩೬೦೦೦ ಮೈಲುಗಳನ್ನು ತಾರಕಂಬಗಳು ವ್ಯಾಪಿಸಿವೆ. ಅದರ ತಂತಿಯು ೨೯೭೮೦೦ ಮೈಲುಗಳನ್ನು ಆವರಿಸಿದೆ. ೧೯೩೬ರಲ್ಲಿ ಜಪಾನಿನಲ್ಲಿ ಒಟ್ಟು ೯೩೯೨

ತಂತಿಯ ಕಚೇರಿಗಳಿದ್ದವು. ಪರದೇಶ ಹಾಗು ದೇಶದಲ್ಲಿ ಕೂಡಿ ೭ ಕೋಟಿ ತಂತಿಗಳು ಕಳಿಸಲ್ಪಟ್ಟವು. ತಂತಿಕಚೇರಿಗಳ ದೃಷ್ಟಿಯಿಂದ ವಿಚಾರಿಸಿದರೆ, ಜಪಾನವು ಪಾಶ್ಚಾತ್ಯ ದೇಶಗಳಿಗಿಂತಲೂ ಹಿಂದೆ ಇದೆ ಎಂದು ಹೇಳಬಹುದು. ಜರ್ಮನಿಯಲ್ಲಿ ೪೩೦೦೦ ಕಚೇರಿಗಳಿವೆ. ೩೧೦೦೦ ಫ್ರಾನ್ಸಿನಲ್ಲಿವೆ. ೧೪೦೦೦ ಇಂಗ್ಲಂಡಿನಲ್ಲಿವೆ. ಆದರೆ ಸುದ್ದಿಗಳ ವಿಷಯದಲ್ಲಿ ಅಮೇರಿಕಾ, ಇಂಗ್ಲಂಡ ಗಳನ್ನು ಬಿಟ್ಟು ಉಳಿದೆಲ್ಲ ರಾಷ್ಟ್ರಗಳನ್ನು ಜಪಾನವು ಸರಿಗಟ್ಟುವದು. ಸದ್ಯಕ್ಕೆ ಜಪಾನಿ ಭಾಷೆಯ ಹತ್ತು ಶಬ್ದಗಳನ್ನು ನಾಲ್ಕು ಆಣೆಗಳಲ್ಲಿ ಕಳಿಸಲು ಅನುಕೂಲವಿದೆ.

## ತಂತಿ ಇಲ್ಲದ ತಾರಾಯಂತ್ರ:

ಸನ್ ೧೮೯೫ರಲ್ಲಿ **ಮಾರ್ಕೋನಿಯು** ತಂತಿಯಿಲ್ಲದ ತಾರಾಯಂತ್ರವನ್ನು ಕಂಡುಹಿಡಿದೊಡನೆಯೇ ಜಪಾನಿಯರೂ ಈ ವಿಷಯದಲ್ಲಿ ಮನಸ್ಸು ಹಾಕಿ ೧೯೦೩ರಲ್ಲಿ **ಕೈಶಿನ್ ಶೋ** ಎಂಬ ಸೂತ್ರ ( Formala )ವನ್ನು ಕಂಡುಹಿಡಿದರು. ನಾಗಾಸಾಕಿಯಿಂದ ೬೩೦ ಮೈಲು ದೂರದಲ್ಲಿರುವ ಫರಮಾಜಾ ಎಂಬಲ್ಲಿಗೆ ಇದರ ಉಪಯೋಗ ಮಾಡಿ ಯಶಸ್ವಿಯಾದರು. ಇವರ ಈ ಸೂತ್ರವು ಜಗತ್ತಿನಲ್ಲಿರುವ ಯಾವ ಸೂತ್ರಗಳಿಗಿಂತಲೂ ಯಾವ ರೀತಿಯಲ್ಲಿಯೂ ಕಡಿಮೆ ಇಲ್ಲವೆಂದು ಪ್ರಸಿದ್ಧಿಯನ್ನು ಪಡೆದಿದೆ. ರಶಿಯಾ ಜಪಾನ ಯುದ್ಧದಲ್ಲಿ ಈ ಸೂತ್ರದ ಸಹಾಯದಿಂದಲೇ **ಶಿನನೋಮಾರು** ಎಂಬ ಹಡಗವು, **ಆಡಮಿರಲ್ ಟೊಗೊಕ್ಕೆ** ಶತ್ರುಗಳ ಚಲನವಲನಗಳನ್ನು ತಿಳಿಸಿದ್ದರಿಂದ ಶತ್ರುಗಳನ್ನು ಜಯಿಸಲು ಸಹಾಯವಾಯಿತೆಂದು ಇತಿಹಾಸವು ಹೇಳುತ್ತದೆ.

೧೯೧೪ರಲ್ಲಿ ಜರುಗಿದ ಅಂತರ್‌ರಾಷ್ಟ್ರೀಯ ಸಮ್ಮೇಲನದಲ್ಲಿ ಸಂಯುಕ್ತಪ್ರಾಂತ ಮತ್ತು ಇಂಗ್ಲಂಡಕ್ಕೆ ಹೋಗುವ ಪ್ರತಿಯೊಂದು ಹಡಗದಲ್ಲಿಯೂ ವಾಯುರಲೆಶ್‌ದ ವ್ಯವಸ್ಥೆಯನ್ನು ಮಾಡಬೇಕೆಂದು ಗೊತ್ತಾಯಿತು. ಈ ಸಂಧಿಯನ್ನು ಸಾಧಿಸಿ, ಜಪಾನವು ತರುಣರಿಗೆ ಶಿಕ್ಷಣ

ವನ್ನು ಕೊಟ್ಟು ಪ್ರತಿಯೊಂದು ಹಡಗದಲ್ಲಿಯೂ ತಂತಿಯಿಲ್ಲದ ತಾರಾಯಂತ್ರದ ವ್ಯವಸ್ಥೆಯನ್ನು ಮಾಡಿತು.

೧೯೨೫ರ ವರೆಗೆ, ಜಪಾನವು ತಂತಿಯಿಲ್ಲದ ತಾರಾಯಂತ್ರಗಳ ಸುದ್ದಿಗಳನ್ನೆಲ್ಲ ಬ್ರಿಟಿಶರ 'ಪಿಸ್ಟರಸ್‌ಎಕ್ಸಟೆನ್‌ಷನ್, ಮತ್ತು ಅಮೇರಿಕೆಯ ವಾಣಿಜ್ಯ ಕಂಪನಿಯ ಮುಖಾಂತರವಾಗಿಯೂ ಸಾಗಿಸುತ್ತಿತ್ತು. ಆದರೆ ೧೯೨೬ರಲ್ಲಿ ೨ ಕೋಟಿ ಎನ್ನುಗಳನ್ನು ವೆಚ್ಚಮಾಡಿ ನಾಲ್ಕು, ತಂತಿಯಿಲ್ಲದ ತಾರಾಯಂತ್ರದ ಕಚೇರಿಗಳನ್ನು ತೆರೆಯಿತು. ಹಿನುಕೋಯಿಯು ಪರದೇಶಗಳಿಗೆ ಸುದ್ದಿಯನ್ನು ಕಳಿಸುವ, ಇಹಿನುರವು ಸುದ್ದಿಗಳನ್ನು ಸ್ವೀಕರಿಸುವ ಸಿಲ್ದಾಣಗಳಾದವು. ಇಂದು ಜಪಾನವು ನಾರ್ವೆನ್, ಪಾರ್ಸಾ, ಸೆಂಟ, ಮೊದಲಾದವುಗಳೊಡನೆ ಪಾಯುರಲೆಸ್ಸಿನ ವ್ಯವಹಾರವನ್ನು ನಡೆಯಿಸುತ್ತಲಿದೆ. ೧೯೩೫ರಲ್ಲಿ ಇದರ ಮುಖಾಂತರ ೬೩,೮೫೬ ಸುದ್ದಿಗಳನ್ನು ಪರದೇಶಗಳಿಂದ ಸ್ವೀಕರಿಸಿತು. ಆದರಂತೆಯೇ ೩೭೬೪೭ ಸುದ್ದಿಗಳನ್ನು ಪರದೇಶಕ್ಕೆ ಕಳಿಸಿದೆ.

## ಟೆಲಿಫೋನ್:

೧೮೭೬ರಲ್ಲಿ ಟೆಲಿಫೋನವು ಕಂಡುಹಿಡಿಯಲ್ಪಟ್ಟಿತು. ಮರುವರುಷವೇ ಜಪಾನಿಯರು, ಟೋಕಿಯೋದಿಂದ ಯಾಕೋಹಾಮಾಕ್ಕೆ ಟೆಲಿಫೋನ ಸರ್ವ್ಹೀಸನ್ನು ಪ್ರಾರಂಭಿಸಿದರು. ಮೊದಲು ಸರಕಾರವೇ ಇದರ ಉಪಯೋಗ ಮಾಡುತ್ತಿತ್ತು. ೧೮೯೦ರಲ್ಲಿ ಸಾರ್ವಜನಿಕರಿಗಾಗಿ, ಟೋಕಿಯೋ ಯಾಕೋಹಾಮಾ ಮಾರ್ಗವು ತೆರೆಯಲ್ಪಟ್ಟಿತು. ಸರಕಾರವು ಅಪೇಕ್ಷಿಸಿದಷ್ಟು ಚಂದಾದಾರರು ದೊರೆಯಲಿಲ್ಲ. ೨೮೫ ಜನರು ಮಾತ್ರ ದೊರೆತರು. ವಾರ್ಷಿಕ ಚಂದಾ ೫೦ ಎನ್ನುಗಳಿದ್ದಿತು.

ಸರಕಾರವು ಇದರ ಪ್ರಯತ್ನವನ್ನು ಬಿಡಲಿಲ್ಲ. ೧೮೯೬ರಲ್ಲಿ ೧ ಕೋಟಿ ೨೦ ಲಕ್ಷ ಎನ್ನುಗಳನ್ನು ಖರ್ಚುಮಾಡಿ ೨೧ ಸಾವಿರ ಚಂದಾದಾರರನ್ನು ದೊರಕಿಸಿತು. ೧೮೯೬ರಲ್ಲಿ ೧ ಕೋಟಿ ೬೭ ಲಕ್ಷ ಎನ್ನುಗಳನ್ನು ಖರ್ಚುಮಾಡಿ ೧,೨೦,೦೦೦ ಚಂದಾದಾರರನ್ನು ದೊರಕಿಸಿತು. ಮಹಾಯುದ್ಧದ

ಕಾಲದಲ್ಲಿ ಜಪಾನದ ವ್ಯಾಪಾರವು ಅಭಿವೃದ್ಧಿ ಹೊಂದಿದ್ದರಿಂದಲೂ, ಟೆಲಿ-ಫೋನಿನ ಮಹತ್ವವನ್ನು ಜನರು ಅರಿತಿದ್ದರಿಂದಲೂ ಜನರ ಕೈಯಲ್ಲಿ ದುಡ್ಡು ಓಡಾಡಹತ್ತಿದ್ದರಿಂದಲೂ ಚಂದಾರರ ಸಂಖ್ಯೆಯೂ ಭರದಿಂದ ಬೆಳೆಯು ಹತ್ತಿತು. ಈ ಸಂಧಿಯನ್ನು ಸಾಧಿಸಿ ಜಪಾನ ಸರಕಾರವು ಹೆಚ್ಚಿಗೆ ಲಾಯಿಸೆನ್ಸ ಕೊಡುವದನ್ನು ತಡೆಯಿತು. ಮತ್ತು ಟೆಲಿಫೋನಿನ ಬೆಲೆ ಯನ್ನೂ ಏರಿಸಿತು. ೬೦೦ ಎನ್ನುಗಳು ಇದ್ದುದನ್ನು ಎರಡು ಸಾವಿರ ಎನ್ನು ಗಳನ್ನು ಮಾಡಿತು. ೧೯೩೬ರಲ್ಲಿ ೮,೭೦,೪೭೬ ಜನ ಚಂದಾದಾರರಿದ್ದರು. ಇವುಗಳನ್ನು ನಡೆಯಿಸುವದಕ್ಕೆ ೫೩೧೦ ಕಚೇರಿಗಳಿದ್ದವು. ಅಮೇರಿಕೆಯಲ್ಲಿ ೧೭,೦೦,೦೦,೦೦೦, ಗ್ರೇಟಬ್ರಿಟನ್‌ದಲ್ಲಿ ೧೪,೦೦,೦೦೦, ಜರ್ಮನಿಯಲ್ಲಿ ೩೫,೦೦,೦೦೦ ಚಂದಾದಾರರಿರುವರು. ಆರ್ಥಿಕ ಪರಿಸ್ಥಿತಿಯು ಉತ್ತಮವು ವಾದಾಗಲೆಲ್ಲ ಜಪಾನಿನಲ್ಲಿ ಚಂದಾದಾರರ ಸಂಖ್ಯೆಯು ಹೆಚ್ಚುವದು.

**ತಂತಿ ಇಲ್ಲದ ಟೆಲಿಫೋನಿನ ಸೌಕರ್ಯ:**

೧೯೧೧ರಲ್ಲಿ ಸರಕಾರವು ಮೊದಲನೇ ಸಲ ಪ್ರಯೋಗವನ್ನು ನಡೆಯಿಸಿ ಯಶಸ್ಸನ್ನು ಪಡೆಯಿತು. ೧೯೩೩ರಲ್ಲಿ ಕೋಟೆ, ಪಟ್ಟಣಗಳಿಗೂ ಸಮುದ್ರದ ದಡದಲ್ಲಿ ನಿಂತಿರುವ ಹಡಗಗಳಿಗೂ ಸಂಭಾಷಣೆಗೆ ಇದರಿಂದ ಅನುಕೂಲ ವನ್ನುಂಟುಮಾಡಿತು. ಇದನ್ನೇ ವಿಸ್ತರಿಸಿ ದೇಶದಲ್ಲೆಲ್ಲ ಉಪಯೋಗಿಸಲು ಅನುವು ಮಾಡಿಕೊಟ್ಟಿತು. ಇದಕ್ಕಿಂತಲೂ ಮುಂದೆ ಸಾಗಿ ೧೯೩೭ರಲ್ಲಿ ೧ ಕೋಟಿ ಎನ್ನುಗಳನ್ನು ವೆಚ್ಚಮಾಡಿ ಅಂತರ್‌ರಾಷ್ಟ್ರೀಯ ಟೆಲಿಫೋನ ಸಂಸ್ಥೆಯನ್ನು ಸ್ಥಾಪಿಸಿ, ಜಗತ್ತಿನಲ್ಲೆಲ್ಲ ವ್ಯವಹಾರ ನಡೆಯಿಸಲು ಅನುಕೂಲ ಮಾಡಿಕೊಟ್ಟಿದೆ. ವಾಯರಲೆಸ್ ಟೆಲಿಫೋನದ ಮುಖಾಂತರ ಯುರೋಪದ ಪಟ್ಟಣಗಳ ಸಂಗಡ ಮಾತನಾಡಬೇಕಾದರೆ, ೩ ನಿಮಿಷಗಳಿಗೆ ೪೦ ಎನ್ನು ಗಳು, ಅಮೇರಿಕದೊಡನೆ ಮಾತನಾಡಲು ೫೪ರಿಂದ ೯೫ ಎನ್ನುಗಳ ವರೆಗೆ, ದಕ್ಷಿಣ ಅಮೇರಿಕಾದ ಪೇಗೂ ಮೊದಲಾದ ದೇಶಗಳ ಸಂಗಡ ಮಾತನಾ ಡಲು ೧೬೪ ಎನ್ನುಗಳು ತಗಲುತ್ತವೆ.

**ಟೆಲಿಫೋಟೋಗ್ರಾಫಿಕ್ ಸರ್ವಿಸ:**

ಸದ್ಯಕ್ಕೆ ಟೋಕಿಯೋದಿಂದ ಓಸಾಕಾಕ್ಕೆ ಮಾತ್ರವಿದೆ.

## ಆಕಾಶವಾಣಿ ( Radio )

ಆಕಾಶವಾಣಿಯ ಪ್ರಚಾರ ಕಾರ್ಯವು ಸರಕಾರದ ಬ್ರಾಡಕಾಸ್ಟಿಂಗ ಕಾರಪೋರೇಶನ್‌ದ ಆಧೀನದಲ್ಲಿದೆ. ಕಾರ್ಯಕ್ರಮಗಳು ಬಹು ಎಚ್ಚರಿಕೆಯಿಂದ ನಡೆಯಿಸಲ್ಪಡುತ್ತವೆ. ರಾಷ್ಟ್ರದ ಧೋರಣೆಗೆ ವಿರೋಧವಾದ ಸಂಗತಿಗಳಿಗೆ ಇಲ್ಲಿ ಇಂಬು ಇಲ್ಲ. ಜಾಹೀರಾತುಗಳಿಗೆ ಅಪ್ಪಣೆಯಿಲ್ಲ. ಪ್ರಜಾಪ್ರತಿನಿಧಿಯ ಸಭಾಸದರು, ಚುನಾವಣೆಗಾಗಿ ಇದನ್ನು ಉಪಯೋಗಿಸಲು ತಡೆಯಿದೆ. ಬೇಕಾದವರು ಮಾರ್ಕೆಟಿನಲ್ಲಿ ಪೋಲಿಸರ ನೇತೃತ್ವದಲ್ಲಿ ೩-೪ ತಾಸು ಮಾತನಾಡಬಹುದು.

ಜಗತ್ತಿನಲ್ಲಿ ರೇಡಿಯೋವು ಪ್ರಾರಂಭವಾದ ೫ ವರ್ಷಗಳನಂತರ ಜಪಾನಿನಲ್ಲಿ ಆಕಾಶವಾಣಿಯು ೧೯೨೫ ರಲ್ಲಿ ಮೊದಲಾಯಿತು. ಪರದೇಶಗಳಲ್ಲಿ ಹರಡುತ್ತಿರುವ ನವ ವಿಚಾರಗಳು ಜಪಾನವನ್ನು ಪ್ರವೇಶಿಸಬಾರದೆಂದೇ ಅವರ ಪ್ರಯತ್ನ. ಆದರೆ ಜಗತ್ತಿನ ಪ್ರವಾಹವನ್ನು ತಡೆಯುವರಾರು ? ಅದಕ್ಕಾಗಿಯೇ, ಅವರು ಜನರು Short-wave ನ ಮುಖಾಂತರ ಆಕಾಶವಾಣಿಯನ್ನು ಕೇಳದಂತೆ ತಡೆ ಮಾಡಲಾಗಿದೆ. ರೇಡಿಯೋ ಸೆಟ್ಟನ್ನು ಮಾಡುವಾಗಲೇ ಶಾರ್ಟವೇವ್ಹ ( Short-wave ) ವನ್ನು ಕೇಳುವದಕ್ಕೆ ಅನುಕೂಲತೆಗಳಿಲ್ಲದಂತೆ ಎಚ್ಚರ ತೆಗೆದುಕೊಳ್ಳುತ್ತಾರೆ. ಪರದೇಶದ ರಾಯಭಾರಿಗಳು ಸರಕಾರದ ಮನ್ನಣೆ ಪಡೆದು ವ್ಯವಸ್ಥೆ ಮಾಡಿಕೊಳ್ಳಬೇಕು.

ಆಹಾರ, ಗಾಳಿ, ಬೆಳಕುಗಳು ಹೇಗೆ ಮಾನವ ಜೀವನಕ್ಕೆ ಆವಶ್ಯಕವಾಗಿವೆಯೋ ಅಷ್ಟೇ, ಆಕಾಶವಾಣಿಯು ಜಪಾನಿಯರಿಗೆ ನಿತ್ಯಜೀವನದ ಸಾಧನವಾಗಿದೆ. ಸಂಗೀತ, ರಾಜಕಾರಣ, ಕಥೆ ಮೊದಲಾದ ಅನೇಕ ವಿಷಯಗಳನ್ನು ತಿಳಿದುಕೊಳ್ಳಲು ಬಡವನಿಂದ ಬಲ್ಲಿದನವರೆಗೆ ಅನುಕೂಲತೆಯಿದೆ. ೧೦ ರೂ. ಮೇಲ್ಪಟ್ಟು ರೇಡಿಯೋ ಯಂತ್ರಗಳು ಸರಕಾರದ ನೇತೃತ್ವದಲ್ಲಿ ಸಿದ್ಧವಾಗುತ್ತವೆ. ಆಕಾಶವಾಣಿಯನ್ನು ಕೇಳಲು ತಿಂಗಳಿಗೆ ೬ ಆಣೆಯನ್ನು ಕೊಟ್ಟು ಸದಸ್ಯರಾಗಬಹುದು. ಫಲಹಾರದ ಅಂಗಡಿಗಳಲ್ಲಿ, ದೊಡ್ಡದೊಡ್ಡ

ಅಂಗಡಿಗಳಲ್ಲಿಯೂ ರೇಡಿಯೋಗಳು ಮಾತನಾಡುತ್ತಲಿವೆ. ಉದ್ಯಾನಗಳಲ್ಲಿಯೂ ಸಾರ್ವಜನಿಕ ಸ್ಥಳಗಳಲ್ಲಿಯೂ ರೇಡಿಯೋ ಯಂತ್ರಗಳು ಇಡಲ್ಪಟ್ಟಿವೆ. ಇಡೀ ದೇಶವೇ ಇದರ ಉಪಯೋಗವನ್ನು ತೆಗೆದುಕೊಳ್ಳುತ್ತಿರುವದು.

೧೯೨೫ರಲ್ಲಿ ಪ್ರಾರಂಭವಾದಾಗ, ಕೇವಲ ೫ ಸಾವಿರ ಜನರು ಕೇಳುತ್ತಿದ್ದರು. ಮರುವರುಷ ಈ ಸಂಖ್ಯೆಯು ೩೩ ಲಕ್ಷಕ್ಕೆ ಏರಿತು. ೧೯೩೬ರಲ್ಲಿ ೪೬,೪೭,೬೪೩ಕ್ಕೆ ಮುಟ್ಟಿತು.

ಸರಾಸರಿ ದೊಡ್ಡದೊಡ್ಡ ಪಟ್ಟಣಗಳಲ್ಲಿ ೧೦೦ಕ್ಕೆ ೬೯ ಮನೆತನಗಳು ರೇಡಿಯೋ ಉಪಯೋಗಿಸುತ್ತವೆ. ಅದೇ ಸಣ್ಣ ನಗರಗಳಲ್ಲಿ ೬೪ರಂತೆ. ಟೋಕಿಯೋ ನಗರದಲ್ಲಿ ೧೨,೮೨,೭೦೩ ಮನೆತನಗಳಿದ್ದು, ೭,೩೩,೦೩೦ (೧೦೦ಕ್ಕೆ ೫೭ರಂತೆ) ಮನೆತನಗಳು ಆಕಾಶವಾಣಿಯನ್ನು ಉಪಯೋಗಿಸುತ್ತವೆ. ಕಾರ್ಯಕ್ರಮ ದಿನಾಲು ೬-೩೦ಕ್ಕೆ ಪ್ರಾರಂಭವಾಗಿ ರಾತ್ರಿ ೯-೫೦ಕ್ಕೆ ಮುಗಿಯುತ್ತದೆ.

---

# ಪತ್ರಿಕೆ, ಪ್ರಕಟನೆಗಳು



ಸಂಘಶಕ್ತಿಯ ಬೆಲೆಯರಿತ ಇಂದಿನ ಯುಗದಲ್ಲಿ ಯಾವ ದೇಶದಲ್ಲಿ ನೋಡಿದರೂ ಸಂಘಗಳುಂಟಾಗಿರುವದು ನಿದರ್ಶನಕ್ಕೆ ಬಂದ ಮಾತಾಗಿದೆ. ಅದರಂತೆ ಜಪಾನಿಯರೂ ಪರಸ್ಪರ ಸಹಾಯಕ್ಕಾಗಿ ಅನೇಕಾನೇಕ ಸಂಘಗಳನ್ನು ಸ್ಥಾಪಿಸಿ, ಅವುಗಳ ಮುಖಾಂತರವಾಗಿ ಅಮೋಘವಾದ ಕಾರ್ಯವನ್ನು ಮಾಡಿದ್ದಾರೆ. ಇಂಥ ಕಾರ್ಯಕ್ಕಾಗಿ ಪತ್ರಿಕೆಗಳು, ಪ್ರಕಟನೆಗಳು ಮಾಡುವಷ್ಟು ಕಾರ್ಯವು ಬೇರಿನ್ನಾವ ಪ್ರಚಾರದಿಂದಾಗಲಾರದೆಂಬುದು ಸ್ಪಷ್ಟವಿದೆ. ಇವುಗಳ ಪ್ರಸಾರ, ಪ್ರಚಾರಕ್ಕಾಗಿ ಈಗಿನ ಕಾಲಕ್ಕೆ ಮುದ್ರಣ ಸೌಕರ್ಯಗಳಿಗೇನು ಕಡಿಮೆಯಿಲ್ಲ. ಅದರಿಂದ ಜನತೆಯಲ್ಲಿ ಯಾವುದೇ ವಿಚಾರವನ್ನಾಗಲಿ, ವಿಷಯವನ್ನಾಗಲಿ ತಿಳಿಯಪಡಿಸಲು ಬಹು ಸುಲಭವಾಗಿದೆ. ಇಂದು ಜಪಾನವು ಪತ್ರಿಕೆಗಳ ದೇಶವೆಂದು ಹೆಸರಾಗಲು ಕಾರಣವಾಗಿದೆ.

ಇಲ್ಲಿಯ ಒತ್ತಾಯದ ಶಿಕ್ಷಣದ ಮೂಲಕ ಪ್ರತಿಯೊಬ್ಬನೂ ಕೆಲವು ಮಟ್ಟಿಗೆ ವಿದ್ಯಾವಂತನಾಗಿರುವದರಿಂದ ಓದುವ ಅಭಿರುಚಿಯು ಹುಟ್ಟುವದು ಸಹಜವಾಗಿದೆ. ಈಗಿನ ಲೆಕ್ಕಾಚಾರದ ಪ್ರಕಾರ ಶಾಲೆಗೆ ಹೋಗಲು ಯೋಗ್ಯರಾದ ಮಕ್ಕಳಲ್ಲಿ ನೂರಕ್ಕೆ ೯೯.೪೭ರಂತೆ ೬ ವರುಷಗಳ ಒತ್ತಾಯದ ಶಿಕ್ಷಣವನ್ನು ಪಡೆಯುತ್ತಲಿದ್ದಾರೆ. ಅದರ ಫಲವಾಗಿಯೇ ಎಲ್ಲರೂ ವರ್ತಮಾನ ಪತ್ರಗಳನ್ನು ಓದುವ ರೂಢಿಯುಳ್ಳವರಾಗಿದ್ದಾರೆ. ಪರದೇಶದ ಅನೇಕ ಪ್ರವಾಸಿಗಳು ಇಲ್ಲಿಯ ಕೂಲಿಯವರೂ, ರಿಕ್ಷಾ ಎಳೆಯುವವರೂ ಪತ್ರಿಕೆ ಓದುವದನ್ನು ಕಂಡು ಆಶ್ಚರ್ಯೋದ್ಗಾರಗಳನ್ನು ತೆಗೆದಿದ್ದಾರೆ. ವಿದ್ಯಾವಂತರಾದ ಮೇಲೆ ಎಂಥ ಉದ್ಯಮವನ್ನು ಕೈಕೊಂಡರೇನು ಅವಿದ್ಯಾವಂತರಾದ ಕೂಲಿಯವರ ಪಂಗಡಕ್ಕೆ ಸೇರಿದಂತಾಗುವದಿಲ್ಲ.

ಸೂಕ್ಷ್ಮವಾಗಿ ನಿರೀಕ್ಷಿಸಿದಲ್ಲಿ ಜಪಾನವು ಪ್ರಜೆಗಳಿಂದ ಆಳಲ್ಪಡುವ ದೇಶವೆಂದು ಕರೆಯಬಹುದು. ಇಲ್ಲಿಯ ಸ್ಥಳೀಯ ಕಂದಾಯದಲ್ಲಿ ನೂರಕ್ಕೆ ೮೦ರಂತೆ ವಿದ್ಯಾಭ್ಯಾಸಕ್ಕೆ ವೆಚ್ಚವಾಗುವದು. ಓದುಗರ ಸಂಖ್ಯೆಯು ಹೆಚ್ಚಿಗಿರುವದರಿಂದ ಪತ್ರಿಕೆಗಳು ಹೆಚ್ಚುಕಾಲ ಬಾಳುವವು. ಅನೇಕ ವರ್ತಮಾನ ಪತ್ರಿಕೆಗಳಿಗೆ ೨೦, ೩೦ ಲಕ್ಷ ಚಂದಾದಾರರಿರುವದರಿಂದ ಸ್ವಂತವಾದ ರೇಲ್ವೆ, ವಿಮಾನ ಮೊದಲಾದ ವಾಹನ ಸೌಕರ್ಯವುಳ್ಳವಾಗಿವೆ. ಪತ್ರಿಕೆಗಳು ಕೇವಲ ಸುದ್ದಿಯ ಸೂರಪ್ಪಗಳಾಗದೆ, ರಾಜಕೀಯ, ಸಾಮಾಜಿಕ, ಸಾರ್ವಜನಿಕ ಜೀವನಕ್ಕೆ ನಾನಾವಿಧದಿಂದ ಸೇವೆಸಲ್ಲಿಸುವ ಸಂಸ್ಥೆಗಳಾಗಿವೆ. ಇಲ್ಲಿ ೮ ಜನರಿಗೊಂದು ಪತ್ರಿಕೆಯು ಹಂಚಲ್ಪಡುತ್ತದೆಂದು ಕಂಡುಬಂದಿದೆ.

ಇಲ್ಲಿ, ೩೦೦ ವರುಷಗಳ ಕೆಳಗೆ, "ಯೋಮಿಯುರಿ" ಎಂಬ ಪತ್ರಿಕೆಯು ಪ್ರಚಾರದಲ್ಲಿತ್ತು. ಇದು ಮರದ ಕೆತ್ತನೆಯಿಂದ (wood block prints) ಸಮಾಚಾರಗಳನ್ನು ಮುದ್ರಿಸುತ್ತಿತ್ತು. ಪಾಶ್ಚಿಮಾತ್ಯ ಪದ್ಧತಿಯಲ್ಲಿ ಮೊಟ್ಟಮೊದಲು ೧೮೬೪ರಲ್ಲಿ "ಷಿನ್ ಬುಷಿ" (Shin bushi=ವರ್ತಮಾನ ಪತ್ರ) ಎಂಬ ಪತ್ರಿಕೆಯು ಜನ್ಮತಾಳಿತು. ಇದರ ತರುವಾಯ ೧೦ ವರುಷಗಳಲ್ಲಿ ಮತ್ತೆ ೪ ಪತ್ರಿಕೆಗಳು ಉದಯವಾದವು. ಅವುಗಳಲ್ಲೊಂದಾದ "ನಿಷಿಷಿನ್ ಸಿ" (ಟೋಕಿಯೋ-ಓಸಾಕಾ ಮೈನಿಚಿ ಈಗಿನ ಹೆಸರು) ಪತ್ರಿಕೆಗೆ ೨೨ ಲಕ್ಷ ವರ್ಗಣಿದಾರರಿದ್ದಾರೆ. ೧೮೭೫ರ ಹೊತ್ತಿಗೆ ನಾಲ್ಕೂ ಪತ್ರಿಕೆಗಳು ಹೆಚ್ಚು ಪ್ರಚಾರದಲ್ಲಿರುವಾಗ ರೇಲ್ವೆಯು ಹಾಕಲ್ಪಟ್ಟಿದ್ದರಿಂದಲೂ, ಬ್ಯಾಂಕುಗಳ ಹುಂಡಿಗಳು ಹೊರಟದ್ದರಿಂದಲೂ ಇನ್ನೂ ಹೆಚ್ಚಿಗೆ ಪ್ರಸಾರ ಹೊಂದಲು ಅನುಕೂಲವಾಯಿತು. ೧೮೭೮ರ ವೇಳೆಗೆ 'ಚಯಾಷಿ ಬುನ್' ಎಂಬ ಪತ್ರಿಕೆಗೂ ಸಾಕಷ್ಟು ಚಂದಾದಾರರಾಗಿದ್ದರು.

ಆರಂಭದಲ್ಲಿ ಪತ್ರಿಕೆಗಳೆಲ್ಲ ಕಾಲಿನಿಂದ ತುಳಿಯಲ್ಪಡುವ ಸಿಲೆಂಡರ್ ಯಂತ್ರದಲ್ಲಿ ಅಚ್ಚಾಗುತ್ತಿದ್ದವು. ೧೮೮೬ರಲ್ಲಿ ಗ್ಯಾಸಿನಿಂದ ನಡೆಸುವ ಯಂತ್ರಗಳು ರೂಢಿಯಲ್ಲಿ ಬಂದವು. ಆದರೆ ಗ್ಯಾಸಿನ ಬೆಲೆಯು ತುಟ್ಟಿಯಾದ್ದರಿಂದ ಅದು ಅಷ್ಟಕ್ಕೆ ನಿಲ್ಲಿಸಲ್ಪಟ್ಟಿತು. ಓಸಾಕಾ ಪತ್ರಿಕೆಯವರು ಪರದೇಶದಿಂದ ಸಿಲೆಂಡರ್ ಯಂತ್ರವನ್ನು ತರಿಸಿ ಉಪಯೋಗಿಸತೊಡಗಿದರು. ಅದರಲ್ಲಿ

ಒಂದು ತಾಸಿಗೆ ಇಪ್ಪತ್ತು ಸಾವಿರ ಪ್ರತಿಗಳು ಅಚ್ಚಾಗುತ್ತಿದ್ದುವು, ಅವನ್ನು ನೋಡಲು ಅಸಂಖ್ಯ ಜನರು ಬರಲಾರಂಭಿಸಿದರು. ಓದುವ ವರ್ಗಣಿದಾರರ ಸಂಖ್ಯೆಯು ಬೆಳೆಯಲು ಒಳ್ಳೇ ಪ್ರಚಾರಸಾಧನವಾಯಿತು. ೧೯೦೩ ರ ಹೊತ್ತಿಗೆ ೬೦ಕ್ಕಿಂತ ಹೆಚ್ಚು ಸಿಲಿಂಡರ ಯಂತ್ರಗಳು ಇಲ್ಲಿ ನಡೆಯುತ್ತಿದವು. ಮಹಾಯುದ್ಧವು ನಿಂತಮೇಲೆ ಒಸಾಕಾ ಪತ್ರಿಕೆಯು ಅಮೇರಿಕೆಯಲ್ಲಿ ತಯಾರಾದ 'ಹೋಮಿ' ಎಂಬ ತೀವ್ರ ವೇಗವುಳ್ಳ ಯಂತ್ರವನ್ನು ಬರಮಾಡಿಕೊಂಡಿತು. ಈಗ ೨ ಲಕ್ಷ ಚಂದಾದಾರರುಳ್ಳ ಎಲ್ಲ ಪತ್ರಿಕೆಗಳೂ ಈಗ ಇದೇ ಯಂತ್ರವನ್ನೇ ಉಪಯೋಗಿಸುತ್ತಿವೆ. ಜಪಾನಿನಲ್ಲಿ ಇಂಥ ಯಂತ್ರಗಳು ೧೬೦ ಇರುವವು.

೧೮೭೭ರಲ್ಲಿ ಪ್ರಚಾರದಲ್ಲಿ ಬಂದ ಪಡಿಯಚ್ಚುಗಳ ಮುದ್ರಣವು ಇಂದು ಎಲ್ಲ ಪತ್ರಿಕೆಗಳ ದೈನಿಕ ಕೆಲಸದೊಳ್ಳೊಂದಾಗಿದೆ. ಚಿತ್ರಗಳಿಲ್ಲದೆ ಯಾವ ಪತ್ರಿಕೆಗಳೂ ಪ್ರಕಟವಾಗುವದಿಲ್ಲ. ಪಡಿಯಚ್ಚುಗಳು ಜಾಗ್ರತೆಯಾಗಿ ಸಿದ್ಧವಾಗುವ ಸೌಕರ್ಯವುಂಟಾದ್ದರಿಂದ ಸಚಿತ್ರ ಪತ್ರಿಕೆಗಳು ಹೊರಡಲನುವಾಗಿದೆ. ಟೆಲಿಫೋಟೋ Telephoto ಕೂಡ ಕಳೆದ ೧೦ ವರುಷಗಳಿಂದ ಇಲ್ಲಿ ಪ್ರಚಾರದಲ್ಲಿ ಬಂದಿದೆ. ಈಗ ಟೋಕಿಯೋ ನಿಚಿನಿಚಿ, ಒಸಾಕಾ ಮೈನಿಚಿ, ದೊಮೆ ಪತ್ರಿಕೆಗಳು ಮಾತ್ರ ಟೆಲಿಫೋಟೋ ಮೂಲಕ ಅಂತರ ಚಿತ್ರಗಳನ್ನು ಮುದ್ರಿಸಿ ಪ್ರಕಟಿಸುವದರಿಂದ [illegible] ಮೆರೆಯುವವೆಂದು ಹೇಳಬಹುದಾಗಿದೆ.

೧೮೭೬ರಲ್ಲಿ ಅಲೆಕ್ಝಾಂಡರ ಗ್ರಾಹಮ್ ಬೆಲ್ಲನು ಟೆಲಿಫೋನನ್ನು ಕಂಡುಹಿಡಿದ ಮಾರನೆಯ ವರುಷವೇ ಅದು ಜಪಾನಿನಲ್ಲಿ ಕಾಲಿಟ್ಟಿತು. ಪತ್ರಿಕೆಗಳು ಇದರ ಉಪಯೋಗವನ್ನು ಬೇಕಾದಷ್ಟು ತೆಗೆದುಕೊಂಡಿವೆ. ಟೆಲಿಗ್ರಾಫಿನ ಮುಖಾಂತರ ದೇಶವಿದೇಶಗಳ ಬಿಸಿಬಿಸಿ ಸುದ್ದಿಯನ್ನು ದೊರಕಿಸಿ ಪ್ರಕಟಿಸುವದರಿಂದ ಪತ್ರಿಕೆಗಳು ಅಧಿಕ ಲಾಭವನ್ನು ಪಡೆಯುವವು. ಒಸಾಕಾ ಮೈನಿಚಿ ಪತ್ರಿಕೆಯು ೧೯೨೩ದಲ್ಲಿ ೫ ವಿಮಾನಗಳನ್ನು ಕೊಂಡು ಸುದ್ದಿಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಮುಟ್ಟಿಸಲು ಆರಂಭಿಸಿದ್ದಲ್ಲದೆ, ಪ್ರಯಾಣಿಕರ ಸಾಮಾನುಗಳನ್ನು ಕೊಂಡೊಯ್ಯುವ

ಓಸಾಕಾ ನಗರಕ್ಕೆ ವಿಮಾನ ಸಂಚಾರವನ್ನೇರ್ಪಡಿಸಿತು. ಇದಾದ ಅನೇಕ ವರುಷಗಳ ಮೇಲೆ ಸರಕಾರವು ಈ ಕೆಲಸಕ್ಕೆ ಕೈಹಾಕಿತು. ಈಗ ಟೋಕಿಯೊ ನಿಚಿನಿಚಿ, ಓಸಾಕಾ ಅಸಾಯಿ ಪತ್ರಿಕೆಗಳು ಸ್ವಂತವಾದ ಹತ್ತುತ್ತು ವಿಮಾನ ಗಳನ್ನು ಇಟ್ಟಿರುವವು. ಇದರಂತೆ ಬೇರೆ ಪತ್ರಿಕೆಗಳೂ ತಮ್ಮ ಯೋಗ್ಯತೆಗೆ ಅನುಸರಿಸಿ ೨-೩ ವಿಮಾನಗಳನ್ನು ಇಟ್ಟಿರುವವು. ೧೯೨೩ರಲ್ಲಾದ ಅದ್ಭುತ ಭೂಕಂಪದ ಕಾಲದಲ್ಲಿ ಪತ್ರಿಕೆಗಳು ತಮ್ಮತಮ್ಮ ವಿಮಾನಗಳ ಮೂಲಕ ಆಹಾರವನ್ನೂ, ಸುದ್ದಿ ಸಮಾಚಾರಗಳನ್ನೂ ಮುಟ್ಟಿಸಿ ಜನತೆಯ ಸೇವೆ ಯನ್ನು ಮಾಡಿದವು. ಈಗಿನ ಚಕ್ರವರ್ತಿಗಳು ಪಟ್ಟವೇರಿದಾಗ, ಇವರ ಚಿತ್ರಗಳನ್ನು ನಾಲ್ಕಾರು ತಾಸುಗಳಲ್ಲಿ ಇಡೀ ದೇಶದ ತುಂಬ ಹಂಚಿದವು. ಪತ್ರಿಕೆಗಳು ಹೊಸ ಪದ್ಧತಿಯ ಎಲ್ಲ ಸೌಕರ್ಯಗಳನ್ನುಂಟುಮಾಡಿಕೊಂಡಿ ರುವದರಿಂದ ಪರಕೀಯರ ಕಣ್ಣಲ್ಲಿ ಒತ್ತುತ್ತಿರುವವು.

ಪತ್ರಿಕೆಗಳು ದೇಶೋನ್ನತಿಗೆ ಪ್ರಬಲವಾದ ಕಾರಣವಾಗಿವೆ. ೧೮೬೮ ರಲ್ಲಿ ಹೊಸ ಪದ್ಧತಿಯ 'ಹೊಣೆಗಾರ ಸರಕಾರ'ವನ್ನು ಸ್ಥಾಪಿಸುವದಕ್ಕೆ ಪತ್ರಿಕೆಗಳು ಅವ್ಯಾಹತವಾಗಿ ದುಡಿದವು. ಅದೇ ಸರಕಾರವೆ ೧೮೭೭ರಲ್ಲಿ ಪತ್ರಿಕೆಗಳ ಕರಾಳ ಶಾಸನವನ್ನು ಹೊರಡಿಸಿ ತೊಂದರೆಯನ್ನು ಕೊಟ್ಟಿತು. ಅಷ್ಟೆಲ್ಲ ಕಷ್ಟವನ್ನನುಭವಿಸಿ, ಹೆಚ್ಚು ಪ್ರಚಾರ ಕಾರ್ಯವನ್ನು ಮಾಡಿದವು. ಆಗ ಸರಕಾರವು ವಿಧಿಯಿಲ್ಲದೆ ೧೮೮೯ರಲ್ಲಿ ಆ ಕರಾಳ ಶಾಸನವನ್ನು ಹಿಂದಕ್ಕೆ ತೆಗೆದುಕೊಳ್ಳಬೇಕಾಯಿತು; ಮತ್ತು ಅನೇಕ ರಿಯಾಯಿತಿಗಳು ದೊರೆತವು. ಮೊದಲಿಗೆ ಸರಕಾರದ ಅಪ್ಪಣೆ ಪಡೆದುಕೊಂಡೇ ಪತ್ರಿಕೆಯು ಜನ್ಮ ತಾಳ ಬೇಕಾಗುತ್ತಿತ್ತು. ಈಗೆಲ್ಲ ಆ ವಿಧಿಗಳ ನಿರ್ಬಂಧವಿಲ್ಲದ್ದರಿಂದ ಪತ್ರಿಕೆಗಳು ಸ್ವತಂತ್ರತೆಯನ್ನು ಭೋಗಿಸುತ್ತಿವೆ.

ಪತ್ರಿಕೆಗಳು ಕಳೆದ ೩೦ ವರುಷಗಳಿಂದ, ದೇಶಕ್ಕೆ ಅಹಿತಕಾರಿಯೆಂದು ಕಂಡುಬಂದಂಥ ಯಾವ ಮಂತ್ರಿಮಂಡಲವನ್ನೂ ಟೀಕಿಸದೆ ಎಂದಿಗೂ ಬಿಟ್ಟಿಲ್ಲ. ಹಾಗೆ ಟೀಕಿಸಿದ್ದರ ಫಲವಾಗಿ ಅವುಗಳು ಜಯವನ್ನೇ ಸಂಪಾದಿ ಸುತ್ತ ಬಂದಿವೆ. ಆದರೆ ೧೯೩೧ರಿಂದ ಇವುಗಳ ಧೋರಣವು ಬದಲಾಗಿದೆ. ಜಪಾನಿಯರು ಮಂಚೂರಿಯದ ಮೇಲೆ ಸುಗ್ಗಿದಾಗಿನಿಂದ ಇಲ್ಲಿಯ ಪತ್ರಿಕೆ

ಗಳು ಸೈನ್ಯಖಾತೆಯವರು ನಡೆಸುತ್ತಿರುವ ಕಾರಭಾರವನ್ನು ಖಂಡಿಸುವ ಗೊಡವೆಗೆ ಹೋಗುವದಿಲ್ಲ. ಸದ್ಯಕ್ಕೆ ಚೀನಾ ಜಪಾನಿಯರ ಘರ್ಷಣೆಯಲ್ಲಿಯೂ, ಸರಕಾರದ ಇಚ್ಛೆಯಂತೆಯೇ ತಾಳಹಾಕಿಕೊಂಡೇ ಹೋಗುತ್ತಲಿವೆ. ಇಡಿ ಜನಾಂಗವು ಸರಕಾರಕ್ಕೆ ಬೆಂಬಲವಾಗಿ ನಿಲ್ಲುವಂತೆ ಹಗಲಿರುಳು ದುಡಿಯುತ್ತಲಿವೆ. ಸ್ತ್ರೀಯರಿಗೆ ಸರಿಸಮಾನ ಹಕ್ಕು ದೊರೆಯುವದಕ್ಕೆ, ಕೂಲಿಕಾರರ ಹಿತಕ್ಕಾಗಿ, ಆರೋಗ್ಯ, ಆರ್ಥಿಕ ಮೊದಲಾದ ವಿಷಯಗಳ ಬಗ್ಗೆ ಒಳ್ಳೆ ಪ್ರಚಾರ ಕಾರ್ಯವನ್ನು ಈ ಪತ್ರಿಕೆಗಳು ಮಾಡದಿರುವದಿಲ್ಲ. ಪತ್ರಿಕೆಗಳು ಸಾಮಾನ್ಯ ವಿಷಯಗಳನ್ನಲ್ಲದೆ, ಸ್ಥಳೀಯ ವಾರ್ತೆಗಳನ್ನೂ ಮುದ್ರಿಸುವದರಿಂದ ಚಂದಾದಾರರು ಹೆಚ್ಚಾಗಲು ಕಾರಣವಾಗಿದೆ.

ಆರಂಭದಲ್ಲಿ ಜಪಾನಿಯ ಪತ್ರಿಕೆಗಳು ಇಂಗ್ಲಿಷ ಪತ್ರಿಕೆಗಳ ಅನುಕರಣ ಮಾಡುತ್ತಿದ್ದವು. ಈಗ ಅಮೇರಿಕೆಯ ಪದ್ಧತಿಯನ್ನು ಹಿಡಿದಿರುವವು. ವಿಷಯಗಳ ಸಾರಾಂಶವು ದೊಡ್ಡ ದೊಡ್ಡ ಅಕ್ಷರಗಳಿಂದ ಪ್ರತಿ ಪುಟಗಳಲ್ಲಿ ಮುದ್ರಿತವಾಗುವದರಿಂದ ವಿಷಯವು ಒಮ್ಮೆಲೆ ವಾಚಕರ ಕಣ್ಣಿಗೆ ಬೀಳದೆ ಹೋಗುವದಿಲ್ಲ. ಅಮೇರಿಕೆಯ ಪತ್ರಿಕೆಗಳಂತೆ ಮುಖ್ಯವಾದ ವಿಷಯಗಳನ್ನು ಒಂದೇ ಪುಟದಲ್ಲಿ ಪ್ರಕಟಿಸದೆ, ಜಪಾನಿಯ ಪತ್ರಿಕೆಗಳು ಇಂಗ್ಲಿಷ ಪತ್ರಿಕೆಗಳಂತೆ ನಾಲ್ಕಾರು ಪುಟಗಳಲ್ಲಿ ಪ್ರಕಟಿಸುತ್ತಲಿವೆ. ಪತ್ರಿಕೆ ಪತ್ರಿಕೆ ನಡುವೆ ಪೈಪೋಟಿಯು ಜೋರಾಗಿರುವದರಿಂದ ಆದಷ್ಟು ಹೆಚ್ಚಿಗೆ ಹೊಸ ಹೊಸ ವಿಷಯಗಳನ್ನು ದೊರಕಿಸುವದಕ್ಕೆ ಸುದ್ದಿಗಾರರ ತಂಡವನ್ನೇ ಪ್ರತಿ ಪತ್ರಿಕೆಯವರು ನಿರ್ಮಿಸಿಕೊಂಡಿದ್ದಾರೆ. ಸುದ್ದಿಗಾರರು ಕಷ್ಟಪಟ್ಟು, ಸಂಶೋಧಿಸಿ ಹೊಸ ಸುದ್ದಿಗಳನ್ನು ದೊರಕಿಸದೆ ಬಿಡುವದಿಲ್ಲ. ೧೯೨೬ರಲ್ಲಿ ಈಗಿನ ಚಕ್ರವರ್ತಿಗಳ ತಂದೆಯವರಾದ ತೈಷೊ ಚಕ್ರವರ್ತಿಗಳು ಕಾಯಿಲೆಯಾಗಿ ಟೋಕಿಯೋದಿಂದ ೬೦ ಮೈಲು ದೂರದಲ್ಲಿ ಶುಶ್ರೂಷೆಯನ್ನು ಪಡೆಯುತ್ತಿದ್ದು, ಅವರ ಪ್ರಕೃತಿ ಚಿಂತಾಜನಕವೆಂದು ಕಂಡುಬಂದಾಗ, ಮರಣವಾರ್ತೆಯನ್ನು ದೊರಕಿಸಲು ಸುದ್ದಿಗಾರರ ತಂಡವೇ ಅಲ್ಲಿ ಹೋಗಿ ನೆಲೆಸಿತ್ತು. ಆದರೆ ಅವರ ದೇಹಸ್ಥಿತಿಯು ಒಂದು ತಿಂಗಳ ವರೆಗೆ ಮುಂದುವರಿದದ್ದರಿಂದ, ಸುದ್ದಿಗಾರರು ಆ ಸ್ಥಳದಿಂದ ಕದಲದೆ, ಕಡೆಗೆ ಮರಣವಾರ್ತೆಯನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ಹಂಚಿದವು. ಇಂಥ ಸುದ್ದಿಗಾರರ

ಮೇಲಾಟವು ಜಾಗೃತವಿರುವದರಿಂದ ಹೊಸ ಹೊಸ, ಬಿಸಿ ಬಿಸಿ ಸುದ್ದಿಗಳು ಪ್ರಕಟನೆ ಹೊಂದಲು ಸಾವಕಾಶವಾಗುವದಿಲ್ಲ. ಮಂತ್ರಿಮಂಡಲದಲ್ಲಿ ಬದಲಾವಣೆಯಾಗುವದಿದೆಯೆಂಬ ವಾಸನೆ ಬಡಿದರೆ ಸಾಕು,—ಸುದ್ದಿಗಾರರು ಮಂತ್ರಿಗಳ ಮನೆಯ ಸುತ್ತುಮುತ್ತು ನಾಯಿಗಳಂತೆ ಸುಳಿದಾಡಿ ಸುದ್ದಿಯನ್ನು ಸಂಗ್ರಹಿಸುತ್ತಾರೆ. ಸುದ್ದಿಯನ್ನು ದೊರಕಿಸುವದಕ್ಕೆ ಪತ್ರಿಕೆಯವರು ನೀರಿನಂತೆ ರೊಕ್ಕವನ್ನು ವೆಚ್ಚಮಾಡುತ್ತಾರೆ. ಟೋಕಿಯೋ ನಿಚಿ-ನಿಚಿ, ಓಸಾಕಾ ಅಸಾಯಿ, ಯೋಮಿಯುರಿ, ಮಿಲಿಯಾಕೋ, ನಿಪ್ಪನ್ ಚುಗಾಯಿ ಪತ್ರಿಕೆಗಳು ತಮ್ಮ ಸುದ್ದಿಗಾರರನ್ನು ಯುರೋಪು ಅಮೇರಿಕಾ, ಏಶಿಯಾ ಖಂಡಗಳ ಮುಖ್ಯ ಮುಖ್ಯ ಪಟ್ಟಣಗಳಲ್ಲಿರಿಸಿ ವಿಷಯಗಳನ್ನು ಸಂಗ್ರಹಿಸುತ್ತಾರೆ. ಈ ರೀತಿಯ ಅನುಕೂಲತೆಗಳನ್ನುಂಟುಮಾಡಿಕೊಂಡಿರುವದು ಪ್ರಥಮ ಶ್ರೇಣಿಗೆ ಸೇರಿದ ಜಪಾನ ರಾಷ್ಟ್ರಕ್ಕೆ ಯೋಗ್ಯವಾಗಿದೆ. ಇದಕ್ಕಾಗಿ ಲಕ್ಷಾಂತರ ರೂಪಾಯಿಗಳು ವ್ಯಯವಾದರೆ ವ್ಯಥೆಪಡುವದಿಲ್ಲ. ೧೯೩೬ರಲ್ಲಿ ಮುಖ್ಯವಾದ ಪತ್ರಿಕೆಗಳು ಎಷ್ಟರ ಮಟ್ಟಿಗೆ ಪರದೇಶದ ವರ್ತಮಾನಗಳಿಗೆ ತಮ್ಮ ಪತ್ರಿಕೆಯಲ್ಲಿ ಸ್ಥಳವನ್ನು ಕೊಟ್ಟಿದ್ದವೆಂಬುವದನ್ನು ಕೆಳಗೆ ಕೊಟ್ಟ ಅಂಕಿಗಳಿಂದ ನೋಡಬಹುದು.

| ಪತ್ರಿಕೆಯ ಹೆಸರು | ಲೇಖನಗಳ ಒಟ್ಟು ಪಂಕ್ತಿಗಳು | ಪರದೇಶದ ವರ್ತಮಾನಗಳ ಪಂಕ್ತಿಗಳು |
|---|---|---|
| ಟೋಕಿಯೋ ಅಸಾಹಿ | ೬೫೭೧೪೨೫ | ೬೬೬೮೬೩ |
| ಟೋಕಿಯೋ ನಿಚಿನಿಚಿ | ೬೧೪೨೫೧೪ | ೫೬೮೬೮೩ |
| ಯೋಮಿಯುರಿ | ೬೪೬೬೬೪೮ | ೫೦೮೦೦೦ |
| ಹೋಚಿ | ೬೬೭೧೦೪೩ | ೪೫೯೦೭೮ |
| ಜಿಜಿ | ೬೫೬೧೨೩೬ | ೫೦೦೧೭೮ |
| | ಒಟ್ಟು....೩೨೪೧೨೮೬೬ | ೨೭೦೨೮೦೨ |

**ಸೂಚನೆ**—ಪ್ರತಿವರುಷವು ಪ್ರಕಟಿಸುವ ಪರದೇಶ ವರ್ತಮಾನಕ್ಕಿಂತ ೧೯೩೬ರಲ್ಲಿ ಕಡಮೆ ಪ್ರಕಟವಾಗಿವೆ. ಯಾಕಂದರೆ ಜಪಾನಿಯರ ಐಕ್ಯತೆ, ಸಂಘಟನೆ, ದೇಶಪ್ರೇಮ ಮೊದಲಾದ ವಿಷಯಗಳಿಗಾಗಿ ಪತ್ರಿಕೆಗಳು ಹೆಚ್ಚು ಗಮನಕೊಟ್ಟದ್ದರಿಂದ ಅಷ್ಟೊಂದು ಸ್ಥಳವು ಅವುಗಳಿಗಾಗಿ ದೊರೆಯಲಿಲ್ಲ.

೧೯೩೫ರ ಕೊನೆಗೆ, ಇಡಿ ಜಪಾನದ ೪೮ ಪ್ರಾಂತಗಳಲ್ಲಿ ಒಟ್ಟು ೧೨೨೨ ದೈನಿಕಗಳು, ೫೦೬ ವಾರಪತ್ರಿಕೆಗಳು, ೭೧೮೦ ಇತರ ಪತ್ರಿಕೆಗಳು ಇದ್ದವೆಂದು ಗೊತ್ತಾಗುತ್ತದೆ. ಟೋಕಿಯೋ, ಓಸಾಕಾ ನಗರಗಳಲ್ಲಿಯೇ ಹೆಚ್ಚು ಪತ್ರಿಕೆಗಳು ಹೊರಡುತ್ತವೆ. ೧೧೦೦ ಪತ್ರಿಕೆಗಳು ದಿಸಕ್ಕೆ ೧ ಕೋಟಿ ೯೦ ಲಕ್ಷ ಪ್ರತಿಗಳನ್ನು ಮುದ್ರಿಸುತ್ತಿವೆಯೆಂದು ಲೆಕ್ಕದಿಂದ ಗೊತ್ತಾಗಿದೆ. ಜಪಾನಿನಲ್ಲಿ ಒಟ್ಟು ೧೬೫೦೦೦೦೦ ಮನೆತನಗಳಿರುವವು. ಆದರೆ ಪತ್ರಿಕೆಗಳ ಸಂಖ್ಯೆಯು ಈ ಸಂಖ್ಯೆಯನ್ನು ಮಿಾರಿಹೋಗಿದೆ.

ಟೋಕಿಯೋ ನಿಚಿನಿಚಿ, ಟೋಕಿಯೋ ಅಸಾಹಿ, ಯೋಮಿಯುರಿ, ಹೋಚಿ, ಚುಗಾಯಿ, ಜಿಜಿ ಪತ್ರಿಕೆಗಳು ಉತ್ತಮವೆಂದು ನಿರ್ಧರಿಸಲ್ಪಟ್ಟಿವೆ. ಟೋಕಿಯೋ ನಿಚಿನಿಚಿ, ಟೋಕಿಯೋ ಅಸಾಯಿ ಇವೆರಡು ಪತ್ರಿಕೆಗಳು ಓಸಾಕಾದಲ್ಲಿ ಮೈನಿಚಿಗಳೆಂಬ ಹೆಸರಿನಲ್ಲಿ ಪ್ರಕಟವಾಗುವವು. ಆಡಳಿತೆ, ಪತ್ರಿಕೆಯ ರೀತಿ ಎಲ್ಲವೂ ಒಂದೇ; ಆದರೆ ಎರಡು ಊರುಗಳಲ್ಲಿ ಪ್ರಕಟವಾಗುವವು. ಪ್ರಮುಖ ಪತ್ರಿಕೆಗಳೆಲ್ಲ ಎರಡು ಸಲ-ಮುಂಜಾನೆ, ಸಾಯಂಕಾಲ ಪ್ರಕಟವಾಗುವವು. ಟೋಕಿಯೋ, ಓಸಾಕಾ ಪಟ್ಟಣಗಳಲ್ಲಿ ಪ್ರಕಟವಾಗುವ ಪತ್ರಿಕೆಗಳ ಸಂಖ್ಯೆಯನ್ನು ಕೆಳಗೆ ಕೊಟ್ಟಿದೆ.

| | ಪತ್ರಿಕೆಯ ಹೆಸರು | | ದಿನಕ್ಕೆ ಹೊರಡುವ ಪ್ರತಿಗಳು |
|---|---|---|---|
| ೧ | ಟೋಕಿಯೋ ಅಸಾಹಿ | | ೨೪೦೦೦೦೦ |
| ೨ | ಟೋಕಿಯೋ ನಿಚಿನಿಚಿ | | ೨೨೧೦೦೦೦೦ |
| ೩ | ಯೋಮಿಯುರಿ (ಟೋಕಿಯೋ ಮಾತ್ರ) | | ೧೦೦೦೦೦೦ |
| ೪ | ಜಿಜಿ | ,, | ೨೦೦೦೦೦ |
| ೫ | ಚುಗಾಯಿ | ,, | ೧೫೦೦೦೦ |
| ೬ | ಕೊಕುಮಿನ್ | ,, | ೧೫೦೦೦೦ |
| ೭ | ಹೋಚಿ | ,, | ೩೦೦೦೦೦ |
| ೮ | ಷಿನ್ ಎಚಿ | ನಗೊಯಾ | ೨೦೦೦೦೦ |
| ೯ | ಫುಕೋಕ ನಿಚಿನಿಚಿ | ಫಕೋಕ | ೧೮೦೦೦೦ |
| ೧೦ | ಹೊಕಾಯಿ ಟೈಮ್ಸ್ | ಸಪರಾ | ೧೦೦೦೦೦ |
| ೧೧ | ಕೊಕುಷಿನ್‌ಪೂ | ಸೆನ್‌ದಾಯಿ | ೧೦೦೦೦೦ |

ಈ ಪತ್ರಿಕೆಗಳ ಸರಾಸರಿ ತಿಂಗಳ ಚಂದಾ ಹಣವು ೧೨ ಆಣೆ ಮಾತ್ರ ಇದೆ; ಪ್ರತಿದಿನದ ಎರಡೂ ಪ್ರತಿಗಳು ದೊರೆಯುವವು. ಅಗ್ಗವಾದ ಚಂದಾ ಹಣವಿರುವದರಿಂದ ಹಲವರು ೩-೪ ಪತ್ರಿಕೆಗಳಿಗೆ ಚಂದಾದಾರರಾಗುವರು. ಇಲ್ಲಿಯ ದೈನಿಕ ಪತ್ರಗಳಿಗೆ ತಿಂಗಳೊಂದಕ್ಕೆ ೫ ಕೋಟಿ ಪೌಂಡುಗಳ ಕಾಗದವು ಬೇಕಾಗುತ್ತದೆ. ಇದರಲ್ಲಿ ೧೦೦ಕ್ಕೆ ೮೮ರಷ್ಟು ಕಾಗದವು ಓಜಿ ಕಾಗದದ ಕಾರಖಾನೆಯಲ್ಲಿ ತಯಾರಾಗುತ್ತದೆ. ಕಾಗದದ ದರವು ಹೆಚ್ಚಾದರೆ ಪತ್ರಿಕೆಯ ವರ್ಗಣಿ ಹಣವೂ ಏರುವದು.

ಟೋಕಿಯೋ, ಓಸಾಕಾ ನಗರಗಳಲ್ಲಿ ಪತ್ರಿಕೋದ್ಯಮದಲ್ಲಿ ತೊಡಗಿರುವ ಕೆಲವು ಪತ್ರಿಕೆಗಳ ಬಂಡವಾಲವು ಕೆಳಗಿನಂತಿದೆ :—

| ಪತ್ರಿಕೆಯ ಹೆಸರು | ಬಂಡವಲವು |
|---|---|
| ಟೋಕಿಯೋ ನಿಚಿನಿಚಿ | ೨೦೦,೦೦,೦೦೦ |
| ಓಸಾಕಾ ಅಸಾಹಿ | ೧೨೦,೦೦,೦೦೦ |
| ಮಿಯಾಕೋ | ೩೦,೦೦,೦೦೦ |
| ಚುಗಾಯಿ | ೨೦,೦೦,೦೦೦ |
| ಹೋಚಿ | ೧೧,೦೦,೦೦೦ |
| ಷಿನ್‌ನಿಚಿ | ೧೫,೦೦,೦೦೦ |
| ತೋಕುರಿನ್ | ೧೫,೦೦,೦೦೦ |

ಜನಗಳ ಮನವನ್ನಾಕರ್ಷಿಸಲು ಸಮಾಚಾರವಲ್ಲದೆ ಕಲೆ, ಆರ್ಥಿಕ, ಸಂಗೀತ, ಭಾಷೆ, ಗೃಹೋಪಯೋಗಿ ವಿಷಯುಗಳ ಮೇಲೆ ಸಾಕಷ್ಟು ಲೇಖನಗಳು ಪ್ರಕಟವಾಗುವವು. ಆಕಾಶವಾಣಿಯ ಸುದ್ದಿಗಾಗಿ ಪ್ರತಿ ಪತ್ರಿಕೆಯಲ್ಲಿಯೂ ಒಂದು ಪುಟವು ಮೀಸಲಾಗಿರುವದು. ಇದರಿಂದ ಪಟ್ಟಣಿಗರಿಗೆ ಅಷ್ಟು ಉಪಯೋಗವಿರದಿದ್ದರೂ, ಹಳ್ಳಿಯ ಓದುಗರಿಗೆ ಪ್ರಯೋಜನವಾಗಲೆಂದು ಅದನ್ನು ಮುಂದರಿಸುತ್ತಲಿದ್ದಾರೆ. ಜಾಹೀರಾತಿಗಾಗಿ ಹೆಚ್ಚು ಆಶಿಬುರುಕತನದಿಂದ ಪತ್ರಿಕೆಗಳು ಹವಣಿಸುವದಿಲ್ಲ. ಜಾಹೀರಾತುಗಳ ಪ್ರಕಟನೆಗಳಿಂದ ವಾಚಕರು ಬೇಸರಿಯುವಂಥ ಪತ್ರಿಕೆಗಳು ಜಪಾನದಲ್ಲಿರುವದಿಲ್ಲ. ಇಲ್ಲಿಯ ಪತ್ರಿಕೆಗಳು ಚಂದಾಹಣದಿಂದಲೇ ಜೀವಿಸುತ್ತಿರುವವು. ಇಲ್ಲಿ ಕೂಲಿಯಿಂದ ಕೋಟ್ಯಾಧೀಶರ ವರೆಗೆ ಎಲ್ಲರೂ ಸ್ವಂತ ಕೊಂಡುಕೊಂಡೇ

ಓದುವರು. ಪ್ರಸಿದ್ಧ ದೈನಂದಿನ ಪತ್ರಿಕೆಯ ಬಿಡಿಸಂಚಿಕೆಯು ೩ ಕಾಸಿಗೆ ಸಿಗುತ್ತದೆ. ಇದು ಇಡೀ ಜಗತ್ತಿನ ಸುದ್ದಿಗಳಿಂದ ತುಂಬಿರುವದರಿಂದ ವಾಚಕರು ಸಂತುಷ್ಟರಾಗುವರು. ರೇಲ್ವೆ, ಬಸ್ಸು, ಟ್ರಾಮ್‌ಗಳಲ್ಲಿ ಪ್ರಯಾಣಮಾಡುವಾಗ ತಮಗಿಷ್ಟವಿದ್ದ ಪತ್ರಿಕೆಗಳನ್ನು ಓದುತ್ತ ಕುಳಿತು-ಕೊಳ್ಳುವರು; ಗಟ್ಟಿಯಾಗಿ ಎಂದೂ ಓದರು. ಪ್ರಯಾಣಿಕರು ಪತ್ರಿಕೆಯನ್ನು ಓದಿದನಂತರ ಜೊತೆಗೆ ತೆಗೆದುಕೊಂಡು ಹೋಗದೆ ಗಾಡಿಯಲ್ಲಿಯೇ ಬಿಟ್ಟು ಹೋಗುತ್ತಾರೆ. ರೇಲ್ವೆಯವರು ಇಂಥ ಪತ್ರಿಕೆಗಳನ್ನು ಸಂಗ್ರಹಿಸಿ, ಮಾರುವದರಿಂದ ಸಾವಿರಾರು ರೂಪಾಯಿಗಳನ್ನು ಸಂಪಾದಿಸುವರು. ನಾಟಕ, ಸಿನೇಮಾ, ಫಲಹಾರದಂಗಡಿ ಮುಂತಾದ ವಿಶ್ರಾಂತಿ, ವಿರಾಮದ ಸ್ಥಳಗಳಲ್ಲಿ ಸ್ಥಳಿಕ-ವರ್ತಮಾನಪತ್ರಿಕೆಗಳನ್ನು ತಂತಮ್ಮ ಅತಿಥಿಗಳ ಅವಗಾಹನೆಗಾಗಿ ಇಡುವ ಪದ್ಧತಿಯಿಲ್ಲಿರುತ್ತದೆ. ಇದರಿಂದ ಪತ್ರಿಕೆಗಳನ್ನುಕೊಳ್ಳಲು ಬೀದಿಗೆ ಬರಲವಕಾಶವಿಲ್ಲದವರು ಇದ್ದಲ್ಲಿಂದಲೇ ವಿಷಯಗಳನ್ನು ತಿಳಿಯಲು ಆಸ್ಪದವಾಗುತ್ತದೆ. ಇಲ್ಲಿಯ ಸ್ತ್ರೀಯರೂ ಪತ್ರಿಕೆಗಳನ್ನು ಓದಿ ವಿಷಯ ಗ್ರಹಣ ಮಾಡಿಕೊಳ್ಳುತ್ತಾರೆ.

ಅನೇಕ ಪತ್ರಿಕೆಗಳು ಸುದ್ದಿಗಾರರಿಂದ ವಾರ್ತೆಯನ್ನು ಪಡೆಯುವವಲ್ಲದೆ ವಾರ್ತಾಪ್ರಸಾರಕ ಸಂಘಗಳಿಂದಲೂ ಪಡಿಯುತ್ತವೆ. ಇದಕ್ಕೆ 'ದೊಮೆ' ಎಂದು ಹೆಸರಿದೆ. ದೊಮೆ ಸಂಸ್ಥೆಯ ಪ್ರತಿನಿಧಿಗಳು ಪ್ರಪಂಚದ ಎಲ್ಲ ಭಾಗಗಳಲ್ಲಿದ್ದುಕೊಂಡು ಸುದ್ದಿಯನ್ನು ಕಳುಹುತ್ತಿರುತ್ತಾರೆ. ಸದ್ಯಕ್ಕೆ ೨೨೦ ದೈನಂದಿನ ಪತ್ರಿಕೆಗಳು ದೊಮೆ ಸಂಸ್ಥೆಯ ಮುಖಾಂತರ ಪರದೇಶದ ಸುದ್ದಿಗಳನ್ನು ಸ್ವೀಕರಿಸುತ್ತಿವೆ. ದೊಮೆಯೂ ಕೂಡ ಪ್ರಪಂಚದಲ್ಲಿನ ವಾರ್ತಾಪ್ರಸಾರಕ ಸಂಸ್ಥೆಗಳಾದ ರೂಟರ್, ಟಾಸ್, ಎ. ಪಿ., ಯು. ಪಿ., ಡಿ. ಎನ್. ಬಿ., ಹ್ಯಾವ್ಸ್, ಸ್ಟೆಪಿಫಿ ಮೊದಲಾದವುಗಳೊಡನೆ ನಿಕಟ ಸಂಬಂಧವನ್ನಿಟ್ಟುಕೊಂಡು ತನ್ನ ಕಾರ್ಯವನ್ನು ಸಾಗಿಸುತ್ತಿದೆ.

ಪತ್ರಿಕೆಗಳು ಪತ್ರಿಕಾಪ್ರಪಂಚದ ಕಾರ್ಯವನ್ನು ಮಾಡುವದಲ್ಲದೆ ಸಾರ್ವಜನಿಕ ಕಾರ್ಯವನ್ನೂ ಮಾಡುತ್ತಿವೆ. ಟೋಕಿಯೋ ನಿಚಿನಿಚಿಯೂ ನಾಲ್ಕು ಮೋಟಾರು ಲಾರಿಗಳನ್ನಿಟ್ಟಿದೆ. ಪ್ರತಿಯೊಂದು ಲಾರಿಯಲ್ಲಿ ಒಬ್ಬ

ವೈದ್ಯ, ಒಬ್ಬ ನರ್ಸು, ತಕ್ಕ ಔಷಧಗಳಿದ್ದು, ಹಳ್ಳಿಹಳ್ಳಿಗೆ ಹೋಗಿ ರೋಗ-ಗ್ರಸ್ತರನ್ನು ಉಪಚರಿಸುವ ಕಾರ್ಯವನ್ನು ಇವು ಮಾಡುತ್ತವೆ. ಅದರಂತೆ ನಾಲ್ಕು ಪತ್ರಿಕೆಯವರು ಟೋಕಿಯೋ ನಗರದಲ್ಲಿ ತಮ್ಮ ಕಚೇರಿಯಲ್ಲಿಯೇ ಉಚಿತ ಔಷಧಾಲಯವನ್ನು ತೆರೆದಿರುವರು. ಈ ಔಷಧಾಲಯದ ಉಪ ಯೋಗ ಮಾಡಿಕೊಳ್ಳಬೇಕೆಂದು ಸಾವಿರಾರು ಜನರು ಪ್ರತಿದಿನವೂ ಅಲ್ಲಿಗೆ ಹೋಗುತ್ತಾರೆ. ಓಸಾಕಾ ಅಸಾಯಿಯೂ ವರ್ಷಾಂತ್ಯದಲ್ಲಿ "ಸಹಾಯಕ ವಾರ"ವೆಂದು ಆಚರಿಸಿ, ೧ ಲಕ್ಷ ಎನ್ನುಗಳ ನಿಧಿಯನ್ನು ಸಂಗ್ರಹಿಸಿ ಬಡವರ ಹಿತಕ್ಕಾಗಿ ವಿನಿಯೋಗಿಸುತ್ತಲಿದೆ. ಇದೇ ಪತ್ರಿಕೆಯು ಕುರುಡರ ಸಹಾಯಕ್ಕೆಂದು Brail pointsಗಳ ಮೂಲಕ (ಉಬ್ಬಿದ ಅಕ್ಷರಗಳಲ್ಲಿ) ವಿಶಿಷ್ಟತರದ ಪತ್ರಿಕೆಯನ್ನು ಪ್ರತಿವಾರವೂ ಪ್ರಕಟಿಸಿ ನೆರವನ್ನು ನೀಡುತ್ತದೆ. ಕೆಲವು ಪತ್ರಿಕೆಗಳು ಸದ್ಯದ ಯುದ್ಧದ ಮೂಲಕ ತಮ್ಮ ದೇಶದ ಪ್ರಸಿದ್ಧ ರಾದ ಹಾಸ್ಯಗಾರರನ್ನು, ಕಥೆಗಾರರನ್ನು, ನರ್ತಕಿಯರನ್ನು ಚೀನಾಕ್ಕೆ ಕಳುಹಿಸಿ ರಣರಂಗದಲ್ಲಿ ಹೋರಾಡುತ್ತಿರುವ ತಮ್ಮ ಸೈನಿಕರನ್ನು ಸಂತೋಷ ಗೊಳಿಸುವಂತೆ ಏರ್ಪಾಡು ಮಾಡಿದ್ದಾರೆ. ಇದಕ್ಕಾಗಿ ಅವರು ದುಡ್ಡಿನ ಮೋರೆಯನ್ನು ನೋಡುವದಿಲ್ಲ.

ಕೆಲವು ಪತ್ರಿಕೆಗಳು ಆಟನೋಟಗಳ ಪ್ರಚಾರಾರ್ಥವಾಗಿ ಪರದೇಶದ ಪ್ರಸಿದ್ಧ ಆಟಗಾರರನ್ನು ಆಹ್ವಾನಿಸಿ, ಅವರ ಮುಖಾಂತರ ದೇಶೀಯ ಆಟ ಗಳಲ್ಲಿ ಹೆಚ್ಚು ಮಮತೆಯುಂಟಾಗುವಂತೆ ಪ್ರಯತ್ನಿಸುತ್ತಿರುವವು. ಹೋದ ವರುಷವೆ ಟೋಕಿಯೋ ಅಸಾಹಿ ಪತ್ರಿಕೆಯೂ ತನ್ನ ಸ್ವಂತ ಹಣದಿಂದ "ಟೋಕಿಯೋ-ಲಂಡನ್ನಿಗೆ" ವೇಗವಾಗಿ ಮುಟ್ಟುವ ವಿಮಾನಗಳ ಸ್ಪರ್ಧೆ ಯಲ್ಲಿ ಸೇರಿ, ಜಯವನ್ನು ಸಂಪಾದಿಸಿತು. ಇದರಲ್ಲಿ 'ಕಾಮಿಕಾಜೆ' ಎಂಬ ವಿಮಾನವು ಟೋಕಿಯೋದಿಂದ ಲಂಡನ್ನಿಗೆ ೯೪ ತಾಸಿನಲ್ಲಿ ತಲುಪಿ, ಇದು ವರೆಗೆ ಯಾರೂ ಪಡೆಯದಿದ್ದ ಮರ್ಯಾದೆಯನ್ನು ಪಡೆಯಿತು.

ಇಡಿ ಜಪಾನದಲ್ಲಿ ಐದು ಪತ್ರಿಕೆಗಳು ಇಂಗ್ಲಿಷ ಭಾಷೆಯಲ್ಲಿ ಪ್ರಕಟ ವಾಗುತ್ತವೆ. ಇವುಗಳಲ್ಲಿ ಎರಡು ಪರದೇಶೀಯರಿಂದ, ಉಳಿದವುಗಳು ಜಪಾನಿಯರಿಂದ ನಡೆಯಿಸಲ್ಪಡುತ್ತಿವೆ. ಜಪಾನಿನಲ್ಲಿ ಒಟ್ಟು ೩೬೬೪೧ ಜನ

ಪರದೇಶೀಯರು ವಾಸಮಾಡಿರುವರು. ಅದರಲ್ಲಿ ೨೪,೦೦೦ ಜನರು ಟೋಕಿಯೋದಲ್ಲಿರುವರು. ಈ ಪರದೇಶೀಯರು ಈ ಪತ್ರಿಕೆಗಳ ಉಪಯೋಗ ವನ್ನು ಮಾಡಿಕೊಳ್ಳುತ್ತಾರೆ.

ಕಳೆದ ೧೦ ವರುಷಗಳಲ್ಲಿ ಇಲ್ಲಿಯ ಹಲವು ವಿಶ್ವವಿದ್ಯಾನಿಲಯಗಳಲ್ಲಿ ವರ್ತಮಾನಪತ್ರ ನಡೆಯಿಸುವ ತರಗತಿಯನ್ನು ತೆರೆದು, ಅನೇಕ ತರುಣರಿಗೆ ಶಾಸ್ತ್ರೋಕ್ತವಾದ ಶಿಕ್ಷಣವನ್ನು ಕೊಡುತ್ತಲಿದ್ದಾರೆ. ಪ್ರತಿಯೊಂದು ವಿಶ್ವವಿದ್ಯಾನಿಲಯವು ತಿಂಗಳಿಗೆ ಎರಡಾವರ್ತಿ 'ವಿಶ್ವವಿದ್ಯಾನಿಲಯದ ಪತ್ರಿಕೆ' ಗಳನ್ನು ಪ್ರಕಟಿಸುತ್ತದೆ; ಕೆಲವು ವಾರಕ್ಕೊಮ್ಮೆ ಪ್ರಕಟಿಸುವವು. ಎಲ್ಲವೂ ವಿದ್ಯಾರ್ಥಿಗಳಿಂದಲೇ ಪ್ರಕಟಿಸಲ್ಪಡುವವು. ೧೯೩೫ರ ಕೊನೆಗೆ ಇಡಿ ದೇಶ ದಲ್ಲಿ ೬೪ ವಿದ್ಯಾರ್ಥಿಗಳ ಪತ್ರಿಕೆಗಳು ಪ್ರಚಾರದಲ್ಲಿದ್ದವು.

## ಪ್ರಕಟನೆಗಳು

೧೮೮೧ರ ಪೂರ್ವದಲ್ಲಿ ಜಪಾನದಲ್ಲಿ ಎಷ್ಟು ಪುಸ್ತಕಗಳು ಅಚ್ಚಾದ ವೆಂಬುದು ಸರಿಯಾಗಿ ಗೊತ್ತಾಗುವಂತಿಲ್ಲ. ಆದರೆ ಸದ್ಯಕ್ಕೆ ಲಭಿಸಿರುವ ಕ್ರಯಪಟ್ಟಿಯ ಮೇಲಿಂದ, ಜಪಾನಿನ ಚಕ್ರಾಧಿಪತ್ಯವು ಸ್ಥಾಪನವಾದಂದಿ ನಿಂದ ೧೮೬೮ರ ವರೆಗೆ, ೬೮,೦೦೦ ಪುಸ್ತಕಗಳು ಪ್ರಕಟಿಸಲ್ಪಟ್ಟವೆಂದು ನಿರ್ಧರಿಸಲಾಗಿದೆ. ೧೮೬೮ ರಿಂದ ೧೯೨೪ರ ವರೆಗೆ ಇಲ್ಲಿ ಒಟ್ಟು ೮೩೪೧೮೭ ವಿವಿಧ ಪುಸ್ತಕಗಳು ಪ್ರಕಟಿಸಲ್ಪಟ್ಟವು. ೧೯೨೪ರಿಂದ ಪ್ರಕಟಿತವಾದ ಪುಸ್ತಕಗಳ ಪಟ್ಟಿಯು ಕೆಳಗೆ ಕೊಡಲಾಗಿದೆ:—

| ವರುಷ | ಪ್ರಕಟಿತ ಪುಸ್ತಕಗಳ ಸಂಖ್ಯೆ |
|---|---|
| ೧೯೨೭ | ೧೯೯೬೬೭ |
| ೧೯೨೮ | ೧೯೮೮೦ |
| ೧೯೨೯ | ೨೧೧೧೧ |
| ೧೯೩೦ | ೨೨೪೭೬ |
| ೧೯೩೧ | ೨೩೧೧೦ |
| ೧೯೩೨ | ೨೨೧೦೪ |
| ೧೯೩೩ | ೨೪೦೭೫ |
| ೧೯೩೪ | ೨೬೩೩೧ |
| ೧೯೩೫ | ೩೦೩೯೭ |
| ೧೯೩೬ | ೨೮೭೩೭ |

೧೯೩೬ರಲ್ಲಿ ಅಚ್ಚಾದ ಪುಸ್ತಕಗಳು ಯಾವ ಯಾವ ವಿಷಯಗಳ ಮೇಲೆ ಬರೆಯಲ್ಪಟ್ಟಿವೆಯೆಂಬದನ್ನು ಕೆಳಗೆ ಕೊಟ್ಟ ರೀತಿಯಲ್ಲಿ ಕಾಣಬಹುದು :—

| ಪುಸ್ತಕಗಳ ವಿಧ | ಸಂಖ್ಯೆ | ಪುಸ್ತಕಗಳ ವಿಧ | ಸಂಖ್ಯೆ |
|---|---|---|---|
| ಷಿಂತೋ ಧರ್ಮ | ೩೨೪ | Transportation | ೭೧೫ |
| ಧಾರ್ಮಿಕ | ೧೩೬೪ | ಲಲಿತಕಲೆ | ೧೧೧೪ |
| ಆಧ್ಯಾತ್ಮಿಕ | ೧೧೩೮ | ಸಂಗೀತ | ೧೧೦೨ |
| ಶಿಕ್ಷಣ | ೨೪೨೪ | ವಿನೋದ | ೬೭೬ |
| ಪಠ್ಯಪುಸ್ತಕಗಳು | ೧೩೭೫ | ಗೃಹಜೀವನ | ೧೨೦೯ |
| ಸಾಹಿತ್ಯ | ೨೮೮೫ | ಕೈಗಾರಿಕೆ | ೧೮೬ |
| ಭಾಷೆ | ೧೧೨೧ | ರಾಜಕಾರಣ | ೧೦೧೯ |
| ಇತಿಹಾಸ | ೪೨೯ | ಕಟ್ಟಳೆ | ೮೨೨ |
| ಜೀವನಚರಿತ್ರೆ | ೪೮೪ | ಆರ್ಥಿಕ | ೧೮೨೮ |
| ಭೂಗೋಲ | ೧೨೩೮ | ಸಾಮಾಜಿಕ | ೧೦೪೮ |
| ಪ್ರವಾಸ | ೬೩ | ಸೈನ್ಯ | ೨೯೪ |
| ಗಣಿತ | ೫೫೮ | Statistics | ೧೪೭ |
| ಶಾಸ್ತ್ರೀಯ | ೫೪೧ | ಕೋಶಗಳು | ೯೪ |
| ಎಂಜನಿಯರಿಂಗ | ೭೭೯ | ನಿಯತಕಾಲಿಕ | ೩೫೧ |
| ವೈದ್ಯಕೀಯ | ೯೨೧ | ಮಿಶ್ರಣ | ೧೪೧೫ |
| ಉದ್ಯೋಗ | ೧೬೯೪ | | ಒಟ್ಟು...೨೮೭೩೭ |

೧೯೩೬ರಲ್ಲಿ ಜಪಾನವು ೨೦ ಲಕ್ಷ ಎನ್ನುಗಳ ಪರದೇಶದ ಪುಸ್ತಕಗಳನ್ನು ಕೊಂಡುಕೊಂಡಿತು. ಅದರಂತೆ ಪರದೇಶಗಳಲ್ಲಿ ನೆಲೆಸಿರುವ ಜಪಾನಿಯರ ಉಪಯೋಗಕ್ಕಾಗಿ ಜಪಾನವು ೨೨ ಲಕ್ಷ ಎನ್ನುಗಳ ಪುಸ್ತಕಗಳನ್ನು ನಿರ್ಯಾತಗೊಳಿಸಿತು.

## ಸಾರ್ವಜನಿಕ ಗ್ರಂಥಾಲಯಗಳು

ಇಡಿ ದೇಶದಲ್ಲಿ ಗ್ರಂಥಭಾಂಡಾರಗಳು ತೆರೆಯಲ್ಪಟ್ಟಿವೆ. ೧೯೩೪ರ ಕೊನೆಗೆ ೪೬೮೬ ಗ್ರಂಥಾಲಯಗಳಿದ್ದವು. ಇವುಗಳಲ್ಲಿ ಎಲ್ಲಕ್ಕೂ ದೊಡ್ಡದಾದ ಪುಸ್ತಕ ಭಂಡಾರವು ಟೋಕಿಯೋ ನಗರದ ಹುಯನೋ ಪಾರ್ಕಿನಲ್ಲಿದೆ. ಇದರಲ್ಲಿ ಸಾರ್ವಜನಿಕರ ಉಪಯೋಗಕ್ಕಾಗಿ ೫ ಲಕ್ಷ ಗ್ರಂಥಗಳಿವೆ. ಅಪರ

ತರುವಾಯ ಟೋಕಿಯೋದಲ್ಲಿರುವ ಇಂಪೀರಿಯಲ್ ವಿಶ್ವವಿದ್ಯಾನಿಲಯದ ಪುಸ್ತಕ ಭಾಂಡಾರವು ದೊಡ್ಡದಿದೆ. ಜಪಾನಿನಲ್ಲಿ ಎಷ್ಟು ಪುಸ್ತಕ ಭಾಂಡಾರಗಳಿದ್ದುವು, ಎಷ್ಟು ಜನ ವಾಚಕರು ಓದುವದಕ್ಕೆ ಹೋಗುತ್ತಿದ್ದರೆಂಬುವದು ಕೆಳಗೆ ಕೊಟ್ಟ ಅಂಕಿಗಳಿಂದ ಕಂಡುಬರುವದು:—

| ವರುಷ | ಭಾಂಡಾರಗಳ ಸಂ. | ಪುಸ್ತಕಗಳ ಸಂಖ್ಯೆ | ವಾಚಕರ ಸಂ. |
|---|---|---|---|
| ೧೯೨೯ | ೪೪೯೦ | ೮೫೯೨೦೦೦ | ೨೭೮೪೭೬೦೦ |
| ೧೯೩೦ | ೪೫೫೩ | ೯೨೭೬೦೦೦ | ೨೨೮೩೫೦೦೦ |
| ೧೯೩೧ | ೪೬೦೯ | ೯೬೩೬೦೦೦ | ೨೩೩೫೫೦೦೦ |
| ೧೯೩೨ | ೪೬೦೯ | ೧೦೧೩೮೦೦ | ೨೨೪೮೦೦೦೦ |
| ೧೯೩೩ | ೪೬೮೬ | ೧೦೫೭೩೦೦೦ | ೨೨೪೭೬೦೦೦ |
| ೧೯೩೪ | ೪೮೮೧ | ೧೦೯೯೩೩೯೪ | ೨೬೩೮೩೦೦೦ |

## ಮಾಸಪತ್ರಿಕೆಗಳು

೧೮೭೩ರಲ್ಲಿ ಮೊದಲ ಸಲಕ್ಕೆ 'ಮಿರೊ ಕೊಜಾಷಿ' ಎಂಬ ನಿಬಂಧಮಾಲೆಯು ಪ್ರಕಟಿಸಲ್ಪಟ್ಟಿತು. ಆದರೆ ವಿದ್ಯಾಪ್ರಸಾರವಾದಂತೆ ಮಾಸಪತ್ರಿಕೆಗಳು ಅಲ್ಲಲ್ಲಿ ತಲೆದೋರಿದವು. ೧೯೩೬ರ ಕೊನೆಗೆ ೮೫೭೮ ಮಾಸಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಇಂದು ಯಾರಾದರೂ ವರ್ತಮಾನಪತ್ರಗಳ ಅಂಗಡಿಯಲ್ಲಿ ಕಾಲಿಟ್ಟರೆ ಅಲ್ಲಿ ನೂರಾರು ಮಾಸಪತ್ರಿಕೆಗಳೂ ದೃಷ್ಟಿಗೋಚರವಾಗುವವು. ಇವುಗಳಲ್ಲಿ ಚರಿತ್ರೆ, ರಾಜಕೀಯ, ಆರ್ಥಿಕ, ಕಲೆ, ಸಂಗೀತ ಮುಂತಾದವುಗಳ ವಿಷಯಗಳ ಬಗ್ಗೆ ಮಿಾಸಲಾದವುಗಳೇ ಹೆಚ್ಚಿಗೆ ಇರುವವು. ಟೋಕಿಯೋ ನಗರವೊಂದರಿಂದಲೆ ತಿಂಗಳಿಗೆ ೮೦೦ ಮಾಸಪತ್ರಿಕೆಗಳು ಪ್ರಕಟವಾಗುತ್ತಿವೆ. ಅಂದಮೇಲೆ ಓದುವವರ ಸಂಖ್ಯೆಯೂ, ಜನರ ತರಗತಿಯೂ ಹೆಚ್ಚಿನದಿರುವದೆಂದು ಹೇಳಿದರೆ ತಪ್ಪಾಗದು.

---

# ಜನಸಂಖ್ಯೆಯ ಬೆಳವಣಿಗೆ ಹಾಗೂ ವೃತ್ತಿ



ಜಪಾನಿನಂಥ ಚಿಕ್ಕ ರಾಜ್ಯದಲ್ಲಿ ಕಳೆದ ೬೫ ವರುಷಗಳಲ್ಲಿ ಜನಸಂಖ್ಯೆಯು ಮೊದಲಿನ ಇಮ್ಮಡಿಯಷ್ಟು ಬೆಳೆದಿದೆ. ಜಪಾನಿಯರು ಪಾಶ್ಚಿಮಾತ್ಯರ ಆರೋಗ್ಯದ ನಿಯಮಗಳನ್ನು ಅನುಸರಿಸುವದರಿಂದ ಮರಣದ ಪ್ರಮಾಣವು ಕಡಮೆ ಆಗುತ್ತ ಬಂದಿದೆ; ಆದರೆ ಇವರ ಪೌರ್ವಾತ್ಯ ಮನೋಭಾವವು ಇನ್ನೂ ಅಚ್ಚಳಿಯದೆ ಹಾಗೆಯೇ ಉಳಿದುದರಿಂದ ಜನನದ ಪ್ರಮಾಣವು ವೃದ್ಧಿಯಾಗುತ್ತಲೇ ಇದೆ.

ತೋಕುಗಾವ ಸರ್ವಾಧಿಕಾರಿಯ ಆಡಳಿತೆಯಲ್ಲಿ ೧೭೨೫ರಲ್ಲಿ ಮೊದಲನೆಯ ಬಾರಿಗೆ ಜನಗಣನೆಯು ಮಾಡಲ್ಪಟ್ಟಿತು. ಆಗ ಜಪಾನಿನ ಜನಸಂಖ್ಯೆಯು ೨॥ ಕೋಟಿ ಮಾತ್ರ ಇದ್ದಿತು. ಮೇಲ್ಕಾಣಿಸಿದ ಜನಗಣನೆಯಲ್ಲಿ ಸೈನಿಕರ, ತಿರುಕರ, ಉಡಾಳರ ಸಂಖ್ಯೆಯು ಕೂಡಿಸಲ್ಪಟ್ಟಿಲ್ಲ. ಪೂರ್ವಕಾಲದಲ್ಲಿ ಸರಕಾರದ ಪ್ರೋತ್ಸಾಹನವು ನೈತಿಕ ದೃಷ್ಟಿಯಿಂದಲೂ, ರಾಜಕೀಯ ದೃಷ್ಟಿಯಿಂದಲೂ ಪ್ರಜರ ಬೆಳವಣಿಗೆಗೆ ಹೆಚ್ಚಾಗಿ ದೊರೆಯುತ್ತಿತ್ತು. ಇದಲ್ಲದೆ ಬೌದ್ಧ ಸನ್ಯಾಸಿಗಳು ಮೋಕ್ಷಪ್ರಾಪ್ತಿಗಾಗಿ ಬೇಕಾದಷ್ಟು ಪುತ್ರಸಂತಾನವನ್ನು ಪಡೆಯಬೇಕೆಂದು ಜನರಿಗೆ ಬೋಧಿಸುತ್ತಿದ್ದರು. ಈ ತೆರದ ಉತ್ತೇಜನವಿದ್ದರೂ ಬರಗಾಲ, ವಿವಿಧ ರೋಗಗಳು ಜನಸಂಖ್ಯೆಯ ಬೆಳವಣಿಗೆಗೆ ಅಡ್ಡಬರುತ್ತಿದ್ದವು. ಆರ್ಥಿಕ ದುಸ್ಥಿತಿಯಿಂದ ಜನರು ಸಂತಾನಾಭಿವೃದ್ಧಿಗೆ ಹೆದರಿ ಜೀವಿಸುತ್ತಿದ್ದರು. ಸಂತಾನ ನಿರ್ಬಂಧತೆಗೆ ಪ್ರಯೋಜನಕಾರಿಯಾದ ಔಷಧಗಳು ಪ್ರಚಾರದಲ್ಲಿ ಬಂದವು. ದೇಶಸಂರಕ್ಷಣೆಯು ಪ್ರಜೆರ ಸಂಖ್ಯೆಯ ಮೇಲೆ ಅವಲಂಬಿಸಿರುವದರಿಂದ, ದೇಶದಲ್ಲಿ ಹಬ್ಬುತ್ತಿರುವ ಸಂತಾನ ನಿರ್ಬಂಧತೆಯನ್ನು ಅಡಗಿಸಲು ಸರ್ವಾಧಿಕಾರಿಯ ಸರಕಾರವು ೧.೭೬೭ರಲ್ಲಿ ಒಂದು ಕಠಿಣತರವಾದ ಕಟ್ಟಳೆಯನ್ನು ಮಾಡಿತು. ಅಂದಿನಿಂದ ಪ್ರಜೆರ ಸಂಖ್ಯೆಯು ಕ್ರಮೇಣವಾಗಿ ಬೆಳೆಯಲವಕಾಶವಾಯಿತು.

ಮೇಜಿ ಚಕ್ರವರ್ತಿಗಳ ಪ್ರೋತ್ಸಾಹನದಿಂದ ೧೮೭೨ರಲ್ಲಿದ್ದ ಜಪಾನಿನ ೩॥ ಕೋಟಿ ಜನಸಂಖ್ಯೆಯು ೧೯೩೦ರಲ್ಲಿ ೬॥ ಕೋಟಿಯನ್ನು ಮುಟ್ಟಲು ಸಾಧ್ಯವಾಯಿತು. ಈ ಅವಧಿಯಲ್ಲಿ ಜಪಾನವು ಪರದೇಶಗಳೊಡನೆ ವ್ಯಾಪಾರವನ್ನು ಹೆಚ್ಚಿಸಿದ್ದರಿಂದಲೂ, ಒಳದೇಶದಲ್ಲಿ ಕೈಗಾರಿಕೆಗಳ ಪ್ರಗತಿಯಿಂದಲೂ ಜನರ ಆರ್ಥಿಕಸ್ಥಿತಿಯು ಒಳ್ಳೆಯದಾಗುತ್ತ ಬಂದುದರಿಂದಲೂ ಜನಸಂಖ್ಯೆಯ ವೃದ್ಧಿಗೆ ಹೆಚ್ಚು ಸುಲಭವಾಯಿತು. ೧೯೩೫ರ ಜನಗಣನೆಯ ಪ್ರಕಾರ ಜಪಾನರ ಸಂಖ್ಯೆಯು ೬ ಕೋಟಿ ೯೦ ಲಕ್ಷವಿದ್ದಿತು. ಹಿಂದಿನ ಜನಗಣನೆಗಿಂತ ಪ್ರತಿ ವರುಷಕ್ಕೆ ಹತ್ತುಹತ್ತು ಲಕ್ಷದಂತೆ ಜನಸಂಖ್ಯೆಯ ಪ್ರಮಾಣವು ಬೆಳೆಯುತ್ತ ಬಂದಿದೆ. ಕಳೆದ ೧೫ ವರುಷಗಳಲ್ಲಿ ಯಾವ ರೀತಿಯಲ್ಲಿ ಜನಸಂಖ್ಯೆಯು ಬೆಳೆಯಿತೆಂಬದನ್ನು ಕೆಳಗಿನ ಸಂಖ್ಯೆಯಿಂದ ಕಾಣಬಹುದಾಗಿದೆ:-

| ವರುಷ | ಜನಸಂಖ್ಯೆ | ಹೆಚ್ಚಾದ ಸಂಖ್ಯೆ |
|---|---|---|
| ೧೯೨೦ | ೫೫೯೬೩೦೫೩ | — |
| ೧೯೨೫ | ೫೯೭೩೬೮೨೨ | ೩೭೭೩೭೬೯ |
| ೧೯೩೦ | ೬೪೪೫೦೦೦೫ | ೪೭೧೩೧೮೩ |
| ೧೯೩೫ | ೬೯೨೫೪೧೪೮ | ೪೮೦೪೧೪೩ |

ಈ ರೀತಿಯ ಬೆಳವಣಿಗೆಯು ಜನನದ ಪ್ರಮಾಣವು, ಹೆಚ್ಚಾದುದರಿಂದ ಆಗದೆ, ಮರಣದ ಪ್ರಮಾಣವು ಕಡಿಮೆಯಾದುದರಿಂದ ಆಗಿರುತ್ತದೆ. ಆ ಬಗ್ಗೆ ಕೆಳಗೆ ಕಾಣಿಸಿದ ಅಂಕೆಗಳು ಮರಣದ ಪ್ರಮಾಣವನ್ನು ತೋರಿಸುತ್ತಿವೆ.

| ವರುಷ | ಜನನ | ಜನನದ ಪ್ರಮಾಣ ನೂರಕ್ಕೆ | ಮರಣ | ಮರಣದ ಪ್ರ. ನೂರಕ್ಕೆ |
|---|---|---|---|---|
| ೧೯೨೦ | ೨೦೨೫೫೬೪ | ೩೬ | ೧೪೨೨೦೯೬* | ೨೫ |
| ೧೯೨೫ | ೨೦೮೬೦೯೧ | ೩೪ | ೧೨೧೦೭೦೬ | ೨೦ |
| ೧೯೩೦ | ೨೦೮೫೧೦೧ | ೩೨ | ೧೧೭೦೮೬೭ | ೧೮ |
| ೧೯೩೧ | ೨೧೦೨೭೮೪ | ೩೨ | ೧೨೮೦೮೯೨ | ೧೮ |
| ೧೯೩೨ | ೨೧೮೨೭೪೨ | ೩೨ | ೧೧೭೧೩೪೪ | ೧೭ |
| ೧೯೩೩ | ೨೧೨೧೨೫೩ | ೩೧ | ೧೧೯೩೯೮೭ | ೧೭ |
| ೧೯೩೪ | ೨೦೪೩೭೮೩ | ೨೯ | ೧೨೩೪೬೮೪ | ೧೮ |
| ೧೯೩೫ | ೨೦೯೦೬೮೧ | ೩೧ | ೧೧೬೨೦೫೮ | ೧೬ |

* ೧೯೨೦ರಲ್ಲಿ ಮರಣದ ಸಂಖ್ಯೆಯು ಹೆಚ್ಚಾಗಲು ವಿಷಮಜ್ವರಗಳೇ ಕಾರಣವು.

ಲಕ್ಷಗಟ್ಟಲೆಯಾಗಿ ಜಪಾನಿನ ಜನಸಂಖ್ಯೆಯು ಬೆಳೆಯುತ್ತಿರುವದನ್ನು ಪಾಶ್ಚಿಮಾತ್ಯ ದೇಶಗಳೊಡನೆ ಹೋಲಿಸಿ ನೋಡಿದರೆ ಅಜಗಜಾಂತರವಾಗಿ ಕಾಣುವದು. ಗ್ರೇಟಬ್ರಿಟನ್ನಿನ ಜನಸಂಖ್ಯೆಯು ೧೯೩೨ರಕ್ಕಿಂತ ೩೩ರಲ್ಲಿ ೮೪ ಸಾವಿರದಷ್ಟು ಹೆಚ್ಚಾಯಿತು. ಜರ್ಮನಿಯದಾದರೂ ಅದೇ ವರುಷದಲ್ಲಿ ೨ ಲಕ್ಷ ೩೩ ಸಾವಿರದಷ್ಟು ಮಾತ್ರ ಹೆಚ್ಚಿತು. ಇದರಂತೆ ಅಮೇರಿಕೆಯ ಜನಸಂಖ್ಯೆಯು ಜಪಾನಿನ ಇಮ್ಮಡಿ ಇದ್ದರೂ ೧೯೩೩ರಲ್ಲಿ ಕೇವಲ ೧೨ ಲಕ್ಷದಷ್ಟು ಮಾತ್ರ ಬೆಳೆಯಿತು. ಅದೇ ವರುಷ ಜಪಾನಿನಲ್ಲಿ ಹತ್ತು ಲಕ್ಷದಷ್ಟು ಜನಸಂಖ್ಯೆಯು ಹೆಚ್ಚಾಗಿ ಬೆಳೆಯಿತು.

ಇತ್ತೀಚೆಗೆ ಜಪಾನಿನಲ್ಲಿ ಶಿಶು ಮರಣದ ಪ್ರಮಾಣವು ಕಡಿಮೆಯಾಗುತ್ತ ಬಂದಿದೆ. ಕಳೆದ ೧೫ ವರುಷಗಳಿಂದ ಮಕ್ಕಳ ಮರಣ ಸಂಖ್ಯೆಯು ಎಷ್ಟಿತ್ತೆಂಬುವದನ್ನು ಕೆಳಗಿನ ಕೋಷ್ಟಕವು ತೋರಿಸಿಕೊಡುತ್ತದೆ:—

ಒಂದು ಸಾವಿರ ಜನಗಳಲ್ಲಿ ವರುಷದೊಳಗಾಗಿ ಸಾಯುವ ಸಂಖ್ಯೆ:-

| ವರುಷ | ಸಂಖ್ಯೆ | ವರುಷ | ಸಂಖ್ಯೆ |
|---|---|---|---|
| ೧೯೨೦ | ೧೬೬ | ೧೯೩೨ | ೧೧೮ |
| ೧೯೨೫ | ೧೪೨ | ೧೯೩೩ | ೧೨೧ |
| ೧೯೩೦ | ೧೩೪ | ೧೯೩೪ | ೧೨೫ |
| ೧೯೩೧ | ೧೩೨ | — | — |

ಇಲ್ಲಿ ವರುಷಕ್ಕೆ ಸುಮಾರಾಗಿ ೧೬ ಲಕ್ಷ ಬಾಲಕ-ಬಾಲಿಕೆಯರು ೬ ವರುಷದ ಒತ್ತಾಯದ ಶಿಕ್ಷಣವನ್ನು ಪಡೆಯಲು ಪ್ರಾಥಮಿಕ ಶಾಲೆಗಳನ್ನು ಪ್ರವೇಶಿಸುತ್ತಾರೆ.

## ಹಳ್ಳಿಗಳಿಂದ ಪಟ್ಟಣಗಳಿಗೆ ಸ್ಥಲಾಂತರ

ಜಪಾನಿನ ಪ್ರಜೆಗಳು, (೧) ತೀವ್ರ ಪ್ರಗತಿ, (೨) ಹಳ್ಳಿಗಳಿಂದ ಪಟ್ಟಣಗಳಿಗೆ ಸ್ಥಲಾಂತರವಾಗುವದು ಎಂಬೆರಡು ವಿಷಯಗಳಲ್ಲಿ ಪ್ರಾಮು-ಖ್ಯತೆಯನ್ನು ಪಡೆದಿದ್ದಾರೆ. ೧೯೩೫ರ ಜನಗಣನೆಯ ಮೇರೆಗೆ ೫ ವರುಷಗಳಲ್ಲಿ ಹೆಚ್ಚಿದ ೪೮ ಲಕ್ಷ ಜನಸಂಖ್ಯೆಯಲ್ಲಿ ೧೦೦ಕ್ಕೆ ೬೦ರಷ್ಟು ಜನರು

ಜಪಾನಿನ ಏಳು ಪ್ರಾಂತಗಳಲ್ಲಿ ನೆಲೆಸಲು ಹೊರಟಿದ್ದಾರೆ. ಟೋಕಿಯೋ ಪ್ರಾಂತವೊಂದರಲ್ಲಿಯೇ ನೂರಕ್ಕೆ ೨೦ರಷ್ಟು ಜನರು ವಾಸಿಸುವರು. ಪಟ್ಟಣಗಳಿಗಿಂತಲೂ ಹಳ್ಳಿಗಳ ಜನಸಂಖ್ಯೆಯೇ ಹೆಚ್ಚಾಗಿರುವದು. ಆದರೂ ಇಂದು ಕೆಲಕೆಲವು ಪಟ್ಟಣಗಳಲ್ಲಿ ಜನಸಂಖ್ಯೆಯು ವಿಪರೀತವಾಗಿ ಬೆಳೆದುಬಿಟ್ಟಿದೆ. ಟೋಕಿಯೋದಂಥ ಮಹಾ ಪಟ್ಟಣದಲ್ಲಿ ಈ ಹೆಚ್ಚಾದ ಜನಸಂಖ್ಯೆಯು ೫೫೩೮ರಷ್ಟಿರುವದು. ೧೯೩೬ರ ಗಣನೆಯ ಪ್ರಕಾರ ಜಪಾನದಲ್ಲಿ ಒಟ್ಟು ೧೭೨೦ ಪಟ್ಟಣಗಳು ೯೬೬೨ ಹಳ್ಳಿಗಳಿದ್ದವೆಂದು ಗೊತ್ತಾಗುತ್ತದೆ. ಒಂದು ಲಕ್ಷಕ್ಕಿಂತ ಜನಸಂಖ್ಯೆಯು ಮಿಕ್ಕಿದ ೨೫ ಪಟ್ಟಣಗಳು ಜಪಾನಿನಲ್ಲಿವೆ. ಜಪಾನವು ಕೈಗಾರಿಕೆಗಳ ದೇಶವಾಗುತ್ತಲಿದೆ ಎನ್ನುವದಕ್ಕೆ ೧೮೮೮ರಲ್ಲಿದ್ದ ೧೨೯೬೩೭ ಹಳ್ಳಿಗಳ ಸಂಖ್ಯೆಯು ೧೯೩೬ರಲ್ಲಿ ೯೬೬೩ಕ್ಕೆ ಇಳಿದುದೇ ಸಾಕ್ಷಿಯಾಗಿದೆ ಜಪಾನಿನ ರಾಜಧಾನಿಯಾದ ಟೋಕಿಯೋದಲ್ಲಿ ೬೦ ಲಕ್ಷ ಜನ ವಸತಿಯಿದ್ದು ಜಗತ್ತಿನಲ್ಲಿ ಮೂರನೆಯ ಪಟ್ಟಣವಾಗಿದೆ. ಟೋಕಿಯೋದಿಂದ ೧೮ ಮೈಲುಗಳ ಮೇಲಿರುವ ಯಾಕೋಹಾಮಾಗೆ ಪ್ರಯಾಣ ಬೆಳೆಸಿದರೆ ಟೋಕಿಯೋ ಮಹಾನಗರದ ವಿಸ್ತೀರ್ಣವೂ, ಭವ್ಯತೆಯೂ ಕಂಡು ಬರುವದು. ಪೂರ್ವ ಜಪಾನದಲ್ಲಿರುವ ಓಸಾಕಾ ನಗರದಲ್ಲಿ ೩೦ ಲಕ್ಷ ಜನ ವಸತಿಯಿದೆ. ಇಡಿ ದೇಶದಲ್ಲಿರುವ ೧೦೧-೧೦೦ ಗಂಡಸು ಹೆಂಗುಸರ ಸರಾಸರಿ ಪ್ರಮಾಣದಲ್ಲಿ ಪಟ್ಟಣಗಳಲ್ಲಿ ಮಾತ್ರ ೧೧೫-೧೦೦ ಪ್ರಮಾಣದಲ್ಲಿ ಸ್ತ್ರೀ ಪುರುಷರು ವಾಸಿಸುತ್ತಾರೆ. ಹಳ್ಳಿಗಳಲ್ಲಿ ಗಂಡಸರು ೨೪ ವರುಷಕ್ಕೆ, ಹೆಂಗಸರು ೨೦ನೇ ವರುಷಕ್ಕೆ ಮದುವೆ ಮಾಡಿಕೊಳ್ಳುವದರಿಂದ ಪಟ್ಟಣಗಳಿಗಿಂತ ಜನನ ಸಂಖ್ಯೆಯು ಅಲ್ಲಿ ಹೆಚ್ಚಾಗಿಯೇ ಇದೆ. ಆದೇ ಪಟ್ಟಣದಲ್ಲಿ ಇರಲು ದುಡ್ಡು ಹೆಚ್ಚು ತಗಲುವದರಿಂದ ೩೦ ವರುಷಕ್ಕೆ ಕಡಿಮೆಯಾಗಿ ಯಾವ ಗಂಡಸಿನ ಮದುವೆಯಾಗಲಾರದು. ಸಾಧಾರಣವಾಗಿ ೨೬ನೆಯ ವಯಸ್ಸಿನಲ್ಲಿ ಇಲ್ಲಿಯ ತರುಣನು ವಿಶ್ವವಿದ್ಯಾನಿಲಯವನ್ನು ಬಿಡುವನು. ಆಮೇಲೆ ೪ ವರುಷ ದುಡಿದು, ಹಣವನ್ನು ಸಂಗ್ರಹಿಸಿ, ಸಂಸಾರಿಗನಾಗಲು ಸಿದ್ಧನಾಗುವನು. ಇದರಂತೆಯೆ ತರುಣಿಯೂ ತನ್ನ ೨೦ನೆಯ ವಯಸ್ಸಿಗೆ ಉಚ್ಚ ಶಿಕ್ಷಣವನ್ನು ಮುಗಿಸುವಳು. ಮುಂದೆ ೨-೩ ವರುಷಗಳಲ್ಲಿ ಹೊಲಿಗೆ, ಮನೆತನದ ಕೆಲಸ ಇತ್ಯಾದಿಗಳನ್ನು ಕಲಿತುಕೊಂಡು ಮದುವೆಗೆ ಉದ್ಯುಕ್ತ

ಳಾಗುವಳು. ಮೇಲ್ಕಂಡ ರೀತಿಯಲ್ಲಿ ಮದುವೆಗಳು ಜರಗುವದರಿಂದ ಪಟ್ಟಣದಲ್ಲಿ ಜನನ ಸಂಖ್ಯೆಯೂ ಬೆಳೆಯಲು ತಡವಾಗುವದು.

೧೯೨೦ರಿಂದ ವರುಷಕ್ಕೆ ಸರಾಸರಿ ೨೧ ಲಕ್ಷ ಜನನಗಳು ಉಂಟಾಗುತ್ತ ಲಿವೆ. ಈ ರೀತಿ ಜನನ ಸಂಖ್ಯೆಯೂ ಬೆಳೆಯಬೇಕಾದರೆ, ಹತ್ತಾರು ವರುಷ ಗಳ ಕೆಳಗೆ ಹುಟ್ಟಿ, ಇಂದು ೧೫ರಿಂದ ೪೪ರವರೆಗಿರುವ ಹೆಂಗುಸರ ಸಂಖ್ಯೆಯೇ ಕಾರಣವೆನಬಹುದು. ಆದರೆ ಇತ್ತೀಚೆಗೆ ಹೆಂಗುಸರ ಪ್ರಕೃತಿಯೂ ಸೂಕ್ಷ್ಮ ವಾಗಿರುವದರಿಂದ ಮುಂದಿನ ೨೦-೩೦ ವರುಷಗಳಲ್ಲಿ ಜನನ ಸಂಖ್ಯೆಯೂ ಹೆಚ್ಚಾಗದೆ ಇದ್ದಷ್ಟು ಉಳಿಯಬಹುದೆಂದು ಊಹಿಸಬೇಕಾಗಿದೆ.

## ಜಪಾನ ಸ್ತ್ರೀಯರ ಜನನಶಕ್ತಿ

| ವರುಷ | ೧೫ರಿಂದ ೪೪ ವರುಷಗಳ ವರೆಗಿನವರು (ಸಾವಿರದಲ್ಲಿ) | ಜನನಶಕ್ತಿಯುಳ್ಳಸ್ತ್ರೀಯರು (ಸಾವಿರದಲ್ಲಿ) |
|---|---|---|
| ೧೯೦೩ ನೋಂದಾಯಿಸಲ್ಪಟ್ಟ | ೯೬೬೨ | ೧೫೨ |
| ೧೯೦೮ ನೋಂದಾಯಿಸಲ್ಪಟ್ಟ | ೧೦೭೯೦ | ೧೬೦ |
| ೧೯೧೩ ನೋಂದಾಯಿಸಲ್ಪಟ್ಟ | ೧೦೪೩೨ | ೧೫೯ |
| ೧೯೧೮ ನೋಂದಾಯಿಸಲ್ಪಟ್ಟ | ೧೨೨೨೫ | ೧೫೨ |
| ೧೯೨೦ ಜನಗಣನೆ | ೧೧೯೬೧ | ೧೬೯ |
| ೧೯೨೫ ಜನಗಣನೆ | ೧೨೫೯೪ | ೧೬೫ |
| ೧೯೩೦ ಜನಗಣನೆ | ೧೩೨೬೨ | ೧೫೭ |

ಟೋಕಿಯೋ ವಾಣಿಜ್ಯ ವಿಶ್ವವಿದ್ಯಾನಿಲಯದ ಅಧ್ಯಕ್ಷರಾದ ಡಾ. ಉಯದರವರು ೧೯೨೫, ೩೦ರ ಜನಗಣನೆಯ ಪ್ರಕಾರ ಮರಣ ಸಂಖ್ಯೆಯ ಪ್ರಮಾಣವು ಸ್ಥಿರವಾಗಿದೆಯೆಂತಲೂ, ವರುಷಕ್ಕೆ ಜನಿಸುವ ೨೧ ಲಕ್ಷ ಮಕ್ಕಳ ಮೇಲೆ, ಬರುವ ೨೦ ವರುಷಗಳಲ್ಲಿ ಜಪಾನಿನ ಸಂಖ್ಯೆಯೂ ಎಷ್ಟರ ಮಟ್ಟಿಗಿರುತ್ತದೆಂಬ ತಮ್ಮ ತಾತ್ವಿಕ ನಿರ್ಣಯವನ್ನು ಸಿದ್ಧಮಾಡಿರುವರು. ಅದು ಈ ರೀತಿಯಾಗಿದೆ:—

## ಮುಂದಿನ ತಲೆಯ ಜನಸಂಖ್ಯೆಯು (ಸಾವಿರದಲ್ಲಿ)

| | ೧೪ ವರುಷಗಳ ವರೆಗೆ | | ೧೫—೫೯ ವರುಷ | | ೬೦—ಅದಕ್ಕೂ ಹೆಚ್ಚು | | ಒಟ್ಟು | | ಹೆಚ್ಚಿನಪ್ರಮಾಣ | |
|---|---|---|---|---|---|---|---|---|---|---|
| ವರುಷ | ನಂ. | % | ನಂ | % | ನಂ. | % | ನಂ. | % | ನಂ. | % |
| ೧೯೨೦ | ೨೦೪೧೬ | ೩೬.೫ | ೩೦೯೪೯ | ೫೫.೩ | ೪೫೯೪ | ೮.೨ | ೫೫೯೬೩ | ೧೦೦.೦ | | |
| ೧೯೨೫ | ೨೧೯೨೪ | ೩೬.೭ | ೩೩೨೨೩ | ೫೫.೬ | ೪೫೮೯ | ೭.೭ | ೫೯೭೩೬ | ೧೦೦.೦ | ೩೭೭೩ | ೬.೭೪ |
| ೧೯೩೦ | ೨೩೫೦೨ | ೩೬.೭ | ೩೫೮೨೭ | ೫೫.೯ | ೪೭೩೭ | ೭.೯ | ೬೪೦೬೭ | ೧೦೦.೦ | ೪೩೩೧ | ೭.೨೫ |
| ೧೯೩೫ | ೨೫೦೫೭ | ೩೬.೭ | ೩೭೯೮೦ | ೫೫.೮ | ೫೦೬೮ | ೭.೪ | ೬೮೧೦೬ | ೧೦೦.೦ | ೪೦೪೦ | ೬.೩೦ |
| ೧೯೪೦ | ೨೫೭೯೫ | ೩೫.೯ | ೪೦೩೯೯ | ೫೬.೩ | ೫೬೫೨ | ೭.೮ | ೭೧೮೪೬ | ೧೦೦.೦ | ೩೭೪೦ | ೫.೪೯ |
| ೧೯೪೫ | ೨೫೮೨೪ | ೩೪.೩ | ೪೩೩೦೬ | ೫೭.೫ | ೬೧೩೦ | ೮.೧ | ೭೫೨೬೧ | ೧೦೦.೦ | ೩೪೧೭ | ೪.೭೫ |
| ೧೯೫೦ | ೨೫೮೨೪ | ೩೪.೩ | ೪೫೯೬೩ | ೫೮.೬ | ೬೫೬೮ | ೮.೩ | ೭೮೩೫೫ | ೧೦೦.೦ | ೩೦೯೨ | ೪.೧೧ |

ಮೇಲ್ಕಾಣಿಸಿದ ರೀತಿಯಲ್ಲಿ ೧೯೬೫ರ ವೇಳೆಗೆ ಇಲ್ಲಿಯ ಜನಸಂಖ್ಯೆಯು ಬೆಳೆಯದೆ ಸ್ಥಿರವಾಗಿ ನಿಲ್ಲುವದು. ಯಾಕಂದರೆ ಹೆಂಗುಸರಲ್ಲಿಯ ಜನನ ಶಕ್ತಿಯು ಕುಂದುತ್ತ ಸಾಗಿದುದೇ ಕಾರಣವಲ್ಲದೆ ಬೇರಾವುದೂ ಇಲ್ಲ. ಅಂತೂ ೧೯೭೦ರಷ್ಟೊತ್ತಿಗೆ ಜಪಾನಿನ ಜನಸಂಖ್ಯೆಯು ೮ ಕೋಟಿಯನ್ನು ಮುಟ್ಟುವದು. ಮರಣದ ಪ್ರಮಾಣವು ಸ್ಥಾಯಿಯಾಗಿರಲು ಸ್ವಲ್ಪ ವಿವರಣೆಯು ಅಗತ್ಯವಿದೆ. ಇತ್ತೀಚೆಗೆ ಮಕ್ಕಳ ಮರಣವು ಕಡಿಮೆಯಾಗಿರುವಂತೆ, ೧೯೩೫ರಲ್ಲಿದ್ದ ೫ ವರ್ಷಕ್ಕೊಳಪಟ್ಟ ಮಕ್ಕಳಸಂಖ್ಯೆಯು ೮೩೬೪೦೦೦, ೧೯೫೦ರಲ್ಲಿ ೯೭೪೪೦೦೦ ಸಂಖ್ಯೆಯನ್ನು ಮುಟ್ಟಿತು. ಇದೇ ರೀತಿಯಾಗಿ ೧೯೩೫–೫೦ರಲ್ಲಿ ಜನನ ಸಂಖ್ಯೆಯೂ ಸ್ಥಿರವಾಗಿ ನಿಂತು, ವಿಪರೀತ ಜನನ, ಮರಣದ ದೇಶವು, ಅಲ್ಪ ಜನನ-ಮರಣದ ದೇಶವಾಗಿ ಪರಿಣಮಿಸಿರುವದು.

## ಉದ್ಯಮದಲ್ಲಿ ತೊಡಗಿದ ಜನಸಂಖ್ಯೆಯ ಹೆಚ್ಚುವಿಕೆ

| ವರುಷ | ಜನಸಂಖ್ಯೆ ೧೫ರಿಂದ ೫೯ | ೫ ವರ್ಷಗಳಲ್ಲಿ ಹೆಚ್ಚಾದುದು | ೫ ವರ್ಷಗಳಲ್ಲಿ ಹೆಚ್ಚಾದ ಪ್ರ. ನೂರಕ್ಕೆ | ಒಟ್ಟು ಜನಸಂ. ಯಲ್ಲಿ ೫ ವ.ಕ್ಕೆ ಹೆಚ್ಚಾದ ಪ್ರ. |
|---|---|---|---|---|
| ೧೯೨೦ | ೩೦೯೪೯ | — | — | — |
| ೧೯೨೫ | ೩೩೨೨೩ | ೨೨೭೪ | ೭.೩೪ | ೬.೭೪ |
| ೧೯೩೦ | ೩೫೮೨೭ | ೨೬೦೪ | ೭.೮೩ | ೭.೨೫ |
| ೧೯೩೫ | ೩೭೯೮೦ | ೨೧೫೩ | ೬ ೦೦ | ೬.೩೦ |
| ೧೯೪೦ | ೪೦೩೯೯ | ೨೪೧೯ | ೭.೮೩ | ೫.೪೯ |
| ೧೯೪೫ | ೪೩೩೦೬ | ೨೯೦೭ | ೭.೧೯ | ೪.೭೫ |
| ೧೯೫೦ | ೪೫೯೬೩ | ೨೬೫೭ | ೬.೧೩ | ೪.೧೧ |
| ೧೯೩೦ರಿಂದ ಒಟ್ಟು ಹೆಚ್ಚಿಗೆ... | | ೧೦೧೩೬ | | |

ಜಪಾನಿನಲ್ಲಿ ಸದ್ಯಕ್ಕಿರುವ ಒಂದು ಕೋಟಿ ಮಕ್ಕಳು ಹತ್ತಾರು ವರುಷಗಳಲ್ಲಿ ಪ್ರಾಪ್ತವಯಸ್ಕರಾದ ಮೇಲೆ ಯಾವ ರೀತಿಯಿಂದ ಜೀವನ ಪಥವನ್ನು ಸಾಗಿಸುವರೆಂಬದು ದೊಡ್ಡ ಸಮಸ್ಯೆಯಾಗಿದೆ. ಪ್ರಜಾಸಂಖ್ಯೆ ಬೆಳೆಯದಂತೆ ಅನೇಕ ಕಾರ್ಯಗಳನ್ನು ಕೈಗೊಳ್ಳಬಹುದು. ಆದರೆ ಈಗಾಗಲೆ ಹುಟ್ಟಿರುವ ಮಕ್ಕಳು ದೊಡ್ಡವರಾದ ಮೇಲೆ ಯಾವ ರೀತಿಯಿಂದಲಾದರೂ

ಹೊಟ್ಟೆಹೊರೆದುಕೊಳ್ಳಲೇಬೇಕಾಗಿದೆ. ಹೆಚ್ಚಾಗಿ ಬೆಳೆಯುವ ಜನಸಂಖ್ಯೆಯು ಯಾವ ರೀತಿ ಕಾಲಹರಣ ಮಾಡಬೇಕೆಂಬುವದೇ ಜಪಾನ ಸರಕಾರವೂ ದೀರ್ಘಾಲೋಚನಪರವಾಗಿದೆ. ವ್ಯವಸಾಯಕ್ಕೆ ಸಾಕಷ್ಟು ಜಮೀನು ಇಲ್ಲದ್ದರಿಂದ ೧೦೦ಕ್ಕೆ ೫೨ರಂತೆ ಜನರು ಬೇರೆ ವೃತ್ತಿಗಳಿಂದ ಜೀವಿಸಬೇಕಾಗಿದೆ. ಜಪಾನಿನಲ್ಲಿ ಖನಿಜ ದ್ರವ್ಯಗಳು ಸಮೃದ್ಧಿಯಾಗಿ ದೊರೆಯುವದಿಲ್ಲ. ಇಲ್ಲಿ ತಲೆಯೊಂದಕ್ಕೆ ೧.೪ ಟನ್ ಕಬ್ಬಿಣವು, ೧.೨೬ ಟನ್ ಕಲ್ಲಿದ್ದಲು ಬೀಳುತ್ತದೆ. ಅದೇ ಗ್ರೇಟಬ್ರಿಟನ್‌ದಲ್ಲಿ ಪ್ರತಿ ತಲೆಗೆ ೧೩೫ ಟನ್ ಕಬ್ಬಿಣವು, ೪.೯೬ ಟನ್ ಕಲ್ಲಿದ್ದಲು, ಅಮೇರಿಕೆಯಲ್ಲಿ ೮೭ ಟನ್ ಕಬ್ಬಿಣವು, ೨೨೭೯೬ ಟನ್ ಕಲ್ಲಿದ್ದಲು ಬೀಳುತ್ತದೆ. ಕೆಲವು ರಾಜ್ಯಗಳಲ್ಲಿ ಪ್ರಜಾ ಸಮುದಾಯಕ್ಕೆ ವ್ಯವಸಾಯಕ್ಕೂ, ಯಾವ ಯಾವ ರೀತಿಯಲ್ಲಿ ಕೈಗಾರಿಕೆಗೂ ನೈಸರ್ಗಿಕ ಅನುಕೂಲತೆಗಳಿವೆ ಎಂಬುದನ್ನು ಕೆಳಗೆ ತೋರಿಸಿದ ಅಂಕೆಗಳಿಂದ ಕಾಣಬಹುದು.

## ಬೇರೆ ಬೇರೆ ದೇಶಗಳಲ್ಲಿಯ ಉಗಮಸ್ಥಾನಗಳು*

| ದೇಶ | | ಜನ ಸಂಖ್ಯೆ ೧೯೨೯ ರಲ್ಲಿ | [illegible] | [illegible] | ತಲೆಯೊಂದಕ್ಕೆ ಟನ್ನಿನ ರೂಪದಲ್ಲಿ ಕಲ್ಲಿದ್ದಲಿ | ಕಬ್ಬಿಣ |
|---|---|---|---|---|---|---|
| ಜಪಾನ | ( ರಜಿಸ್ಟರ್ಡ ೨೯) | ೬೨೯೩೮೦೦೦ | ೦.೧೯೬ | ೧೫.೮ | ೧.೨೬ | ೧೮೪ |
| ಗ್ರೇಟ ಬ್ರಿ. | (ಎಸ್ಟಿಮೇಟೆಡ್ ೨೯) | ೪೪೬೪೧೦೦೦ | ೦.೧೧೬ | ೨೨.೬ | ೪.೯೬ | ೧೩೫ |
| ಫ್ರಾನ್ಸ | ( ,, ೨೯) | ೪೧೨೨೦೦೦೦ | ೦.೫೪೩ | ೯೧.೨ | ೭೯೫ | ೨೦೦ |
| ಜರ್ಮನಿ | ( ,, ೨೯) | ೬೪೭೪೫೦೦೦ | ೦.೩೧೮ | ೪೩.೯ | ೩೮೫೭ | ೨೧ |
| ಇಟಲಿ | ( ,, ೨೬) | ೪[illegible]೦೦೦೦ | ೦.[illegible]೦ | ೪೪.೨ | ೬ | ೦.೨ |
| ಆಸ್ಟ್ರೇಲಿಯಾ | ,, ೨೯) | ೬೪೧೫೩೭೩ | ೧.೫೪೭ | ೧.೫ | ೨೫೦೦೦ | ೧೬೪ |
| ಅಮೇರಿಕಾ | ( ,, ೩೦) | ೧೨೨೬೯೮೧೯೦ | ೧.೧೭೩ | ೧೮.೪ | ೨೨೭೯೬ | ೮೭ |
| ಇಂಡಿಯಾ | ( ,, ೨೧) | ೩೧೮೮೫.೫೨೮೯೪ | ೦.೩೯೩ | ೪೬.೪ | ೨೩೫ | ೧೦ |

* "Liberty of trading" Bulletin No. 1,

ಮಹಾಯುದ್ಧದ ಮೂಲಕ ಜಪಾನಕ್ಕೆ ದೊರೆತ ಅಪಾರ ಲಾಭದಿಂದ ಇಲ್ಲಿಯ ಜನರ ಬಾಳಿನ ಮಟ್ಟವು ಉಚ್ಚಸ್ಥಿತಿಯನ್ನು ಮುಟ್ಟಿತು. ಆದರೆ ಜಗತ್ತಿನ ಆರ್ಥಿಕ ಮುಗ್ಗಟ್ಟು ಇಲ್ಲಿಯ ಬೆಳೆಯುತ್ತ ಬಂದ ಪ್ರಜೆರ ಮೇಲೆ ಕೂಡ ಪರಿಣಾಮ ಮಾಡದೆ ಬಿಡಲಿಲ್ಲ. ಕಳೆದ ಶತಮಾನದಲ್ಲಿ ಪ್ರಸಿದ್ಧ ಅರ್ಥ ಶಾಸ್ತ್ರವೇತ್ತನಾದ ಮಾಲ್‌ಥ್ಯೂಸನು ಇದೇ ಬಗೆಯ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾನೆ. ಇಂದು ಹಾಗೆ ಅಭಿಪ್ರಾಯವನ್ನು ಮಾಡಿಕೊಳ್ಳಲು ಅಷ್ಟೊಂದು ಕಾರಣವಿಲ್ಲವೆನಬೇಕಾಗಿದೆ. ಒಂದು ವೇಳೆ ಪ್ರಜಾ ಸಂಖ್ಯೆಯು ಬೆಳೆದದ್ದಾದರೆ ಅವರೆಲ್ಲರಿಗೂ ಉಪಜೀವಿಸಲು ಆಹಾರವನ್ನೊದಗಿಸುವ ಕರ್ತವ್ಯವು ಸರಕಾರದ ತಲೆಯ ಮೇಲಿರುತ್ತದೆ. ಹಾಗೆ ಸರಕಾರವು ಕೂಡ ಆರ್ಥಿಕ ಪರಿಪೋಷಣೆಗಾಗಿ ಏನಾದರೊಂದು ಉಪಾಯವನ್ನು ಮಾಡದೆ ಎಂದಿಗೂ ಇರದು.

ಜಪಾನಿನಲ್ಲಿಯ ಈ ಸಮಸ್ಯೆಯನ್ನು ಬಗೆಹರಿಯಿಸಲು ೪ ಉಪಾಯ ಗಳನ್ನು ಸೂಚಿಸಬಹುದು. (೧) ಕೈಗಾರಿಕೆ ಹಾಗು ವ್ಯವಸಾಯಗಳನ್ನು ವೃದ್ಧಿಗೊಳಿಸುವದು. (೨) ಪರದೇಶಕ್ಕೆ ಕೆಲವು ಜನರು ಹೋಗಿ ನೆಲೆಸು ವದು. (೩) ನಿರ್ಯಾತದ ಸರಕುಗಳ ಪ್ರಮಾಣವನ್ನು ಬೆಳೆಯಿಸುವದು. (೪) ಜನನ ನಿರೋಧವನ್ನು ಮಾಡುವದು. ಹೀಗೆ ಚತುರೋಪಾಯಗಳಿಂದ ಜಪಾನಿನ ಭೀಕರ ಸಮಸ್ಯೆಯು ಹಗುರಾಗಬಹುದೆಂದು ಊಹಿಸಲವಕಾಶ ಏದೆ.

೧. ಕೈಗಾರಿಕೆ ಹಾಗೂ ವ್ಯವಸಾಯ:—ಕೆಲವು ವರುಷಗಳ ಹಿಂದೆ ಜಪಾನಿಯರು ವ್ಯವಸಾಯದಿಂದಲೇ ಹೆಚ್ಚಾಗಿ ಜೀವಿಸುತ್ತಿದ್ದರು. ಜನಾಂ ಗವು ಬೆಳೆಬೆಳೆದಂತೆ ಹೊಸಹೊಸತಾದ ಭೂಮಿಯು ದೊರಕದಿರುವದರಿಂದ ಇಂದು ನೂರಕ್ಕೆ ೪೮ರಂತೆ ಮಾತ್ರ ಜನರು ವ್ಯವಸಾಯದಲ್ಲಿ ತೊಡಗಿರು ತ್ತಾರೆ. ಸಾಗುವಳಿಗೆ ಯೋಗ್ಯವಾದ ಭೂಮಿಯಲ್ಲಿ ನೂರಕ್ಕೆ ೧೫ರಷ್ಟು ಕ್ಷೇತ್ರವು ತನ್ನ ಸಾರವನ್ನು ಕಳೆದುಕೊಂಡು ಫಲವನ್ನು ಕೊಡುವಂಥ ಸ್ಥಿತಿಯಲ್ಲಿರುವದಿಲ್ಲ. ವ್ಯವಸಾಯಾಭಿವೃದ್ಧಿಗೆ ಈ ದೇಶದಲ್ಲಿ ಮಾರ್ಗವೇ ಇಲ್ಲ. ಆದರಂತೆ ಸಾಗುವಳಿಯಾದ ಭೂಮಿಯನ್ನೇ ಹೆಚ್ಚು ಫಲಕಾರಿ

ಯನ್ನಾಗಿ ಮಾಡುವಂಥ ಉಪಾಯುಗಳು ಅಷ್ಟು ಪ್ರಯೋಜನಕಾರಿಯಾಗಿ ಪರಿಣಮಿಸಿರುವದಿಲ್ಲ. ಅಂದಮೇಲೆ ಬಹುಜನರು ಬೇರೆ ಬೇರೆ ವೃತ್ತಿಗಳನ್ನವ ಲಂಬಿಸಿ ಉಪಜೀವಿಸಬೇಕಲ್ಲದೆ ಬೇರೆ ಉಪಾಯುಗಳೇ ಇಲ್ಲ. ದನಕರು, ಕುರಿ ಮೊದಲಾದವುಗಳನ್ನು ಸಾಕುವದರಿಂದ ಅನೇಕರಿಗೆ ಹೊಟ್ಟೆಹೊರೆಯುಲು ಮಾರ್ಗವಾಗಬಹುದು. ಆದರೆ ಇಲ್ಲಿಯು ವಾಯುಗುಣದ ಮೂಲಕ ಅದೂ ಕೂಡ ಇಲ್ಲಿ ಸಾಧ್ಯವಿಲ್ಲ. ಅದನ್ನು ಕೆಳಗಿನ ಅಂಕಿಗಳಿಂದ ಕಾಣಬಹುದು.

### ಸಾಗುವಳಿಯಾದ ಭೂಮಿ ಹಾಗು ದನಕರು ಮೊದಲಾದವುಗಳು * (ಸಾವಿರದಲ್ಲಿ)

| ವರುಷ | ಸಾಗುವಳಿಯಾದ ಕ್ಷೇತ್ರ | ದನಕರು | ಕುದುರೆಗಳು | ಆಡುಗಳು | ಕುರಿಗಳು | ಹಂದಿ |
|---|---|---|---|---|---|---|
| ೧೯೨೧ | ೬೦೪೮ | ೧೪೪೦ | ೧೫೨೦ | ೧೪೨ | ೯ | ೫೦೦ |
| ೧೯೨೨ | ೬೦೪೦ | ೧೪೫೯ | ೧೫೭೬ | ೧೫೧ | ೧೧ | ೫೧೨ |
| ೧೯೨೩ | ೫೯೮೯ | ೧೪೬೯ | ೧೫೭೨ | ೧೫೯ | ೧೫ | ೬೬೮ |
| ೧೯೨೪ | ೬೦೧೫ | ೧೪೫೬ | ೧೫೬೯ | ೧೫೮ | ೧೬ | ೭೪೩ |
| ೧೯೨೫ | ೬೦೧೭ | ೧೪೬೦ | ೧೫೬೩ | ೧೬೮ | ೧೭ | ೬೭೩ |
| ೧೯೨೬ | ೬೦೩೦ | ೧೪೬೫ | ೧೪೮೬ | ೧೭೯ | ೧೮ | ೬೨೧ |
| ೧೯೨೭ | ೬೦೨೮ | ೧೪೭೪ | ೧೪೯೪ | ೧೯೫ | ೧೯ | ೬೭೭ |
| ೧೯೨೮ | ೬೦೩೫ | ೧೪೮೪ | ೧೪೯೪ | ೨೦೮ | ೧೯ | ೭೬೪ |
| ೧೯೨೯ | ೫೮೪೯ | ೧೪೬೮ | ೧೪೯೦ | ೨೧೫ | ೨೧ | ೭೦೬ |
| ೧೯೩೦ | ೫೮೬೭ | ೧೪೯೮ | ೧೪೯೦ | ೨೧೭ | ೨೪ | ೭೪೨ |

೨. ಪರದೇಶಗಮನ:—ಒಂದು ರಾಷ್ಟ್ರದಲ್ಲಿ ಜನಸಂಖ್ಯೆಯು ಹೆಚ್ಚಾದರೆ, ಅವರಲ್ಲಿ ಹಲವರು ಪರದೇಶಕ್ಕೆ ಹೋಗುವದರಿಂದ ಉದರನಿರ್ವಾಹದ ಸಮಸ್ಯೆಯು ಎಷ್ಟೋ ಬಗೆಹರಿದಂತಾಗುವುದು. ಆದರೆ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹೋಗಿ ನೆಲೆಸಲು ಅನೇಕ ತೊಂದರೆಗಳಿವೆ. ಜಪಾನಕ್ಕೆ ಹತ್ತಿರವಿರುವ ಅಮೇರಿಕಾ, ಆಸ್ಟ್ರೇಲಿಯಾಗಳಲ್ಲಿ ಜಪಾನಿಯರು ನೆಲೆಯೂರಲವಕಾಶವಿಲ್ಲ. ದಕ್ಷಿಣ ಅಮೇರಿಕೆಯಲ್ಲಿ ಇವರಿಗೆ ವಾಸಿಸಲು ಅಲ್ಪಾವಕಾಶವಿದ್ದರೂ ಇಲ್ಲಿ ವರುಷಕ್ಕೆ ೧೦ ಲಕ್ಷದಂತೆ ಬೆಳೆಯುತ್ತಿರುವ ಜನಸಂಖ್ಯೆಗೆ

* Dr. Teijero meda: Population Problem in Japan.

ಆಶ್ರಯವು ದೊರೆಯಲಾರದು. ಮಂಚೂರಿಯಾ ದೇಶವು ಜಪಾನಿಯರ ವಶವಾಗಿರುವದರಿಂದ ಅನೇಕರು ಅಲ್ಲಿ ಹೋಗಿ ವ್ಯವಸಾಯಮಾಡಿಕೊಂಡು ವಾಸಿಸಬಹುದು. ಆದರೆ ಮಂಚೂರಿಯಾದಲ್ಲಿಯೇ ಜನಸಂಖ್ಯೆಯು ಬೆಳೆದಿರುವದರಿಂದ ಬಲು ದಟ್ಟಾಗಿದೆ. ಆದರಿಂದ ಬೇರೆಯವರಿಗೆ ಅಷ್ಟೊಂದು ಆಶ್ರಯ ದೊರೆಯಲು ಸಾಧ್ಯವಾಗಲಾರದು. ಮೇಲಾಗಿ ಇಲ್ಲಿಯ ಹವೆಯು ಜಪಾನಿಯರಿಗೆ ಹಿತಾವಹವಿಲ್ಲದ್ದರಿಂದ ಯಾವ ಜಪಾನೀಯನೂ ಅಲ್ಲಿ ನೆಲೆಸಲು ಆಶಿಸುವದಿಲ್ಲ. ಇತ್ತೀಚೆಗೆ ಜಪಾನ ಸರಕಾರವು ಅಲ್ಲಿ ಹೋಗಿ ನೆಲೆಸುವವರಿಗೆ ಅನೇಕಾನೇಕ ಅನುಕೂಲತೆಗಳನ್ನು ಒದಗಿಸಿರುವದರಿಂದ ಇಲ್ಲಿಯ ವರೆಗೆ ೫೦ ಸಾವಿರ ಜಪಾನಿಯರು ಮಾತ್ರ ಅಲ್ಲಿ ಹೋಗಿ ನೆಲೆಸಿದ್ದಾರೆ. ಪರದೇಶಕ್ಕೆ ಹೋದ, ತಿರುಗಿ ಬಂದವರ ಅಂಕಿಗಳು ಕೆಳಗೆ ಕಾಣಿಸಿದಂತಿವೆ:—

## ಪರದೇಶಕ್ಕೆ ತೆರಳಿದವರು, ತಿರುಗಿದವರು

| ವರುಷ | ಅಪ್ಪಣೆ ಪಡೆದು ತೆರಳಿದವರು | ತಿರುಗಿದವರು | ಅಂತರ |
|---|---|---|---|
| ೧೯೨೬ | ೧೬೧೮೪ | ೧೪೫೪೯ | ೧೬೩೫ |
| ೧೯೨೭ | ೧೮೦೪೧ | ೧೪೭೩೫ | ೩೩೦೬ |
| ೧೯೨೮ | ೧೯೮೫೦ | ೧೫೦೦೪ | ೪೮೪೬ |
| ೧೯೨೯ | ೨೫೭೦೪ | ೧೪೦೭೩ | ೧೧೬೩೧ |
| ೧೯೩೦ | ೨೧೮೨೯ | ೧೫೪೩೨ | ೬೩೭೭ |
| ೧೯೩೧ | ೧೦೩೮೪ | ೧೨೯೬೫ | ೨೫೮೧ |
| ೧೯೩೨ | ೧೯೦೩೩ | ೧೩೧೭೦ | ೫೮೬೩ |
| ೧೯೩೩ | ೨೭೩೧೭ | ೧೪೧೪೧ | ೧೩೧೭೬ |
| ೧೯೩೪ | ೨೮೦೮೭ | — | — |
| ೧೯೩೫ | ೧೦೮೧೩ | — | — |

ಇದರಲ್ಲಿ ಮಂಚೂರಿಯಾ, ಚೈನಾಗಳಿಗೆ ತೆರಳಿದವರ ಸಂಖ್ಯೆಯು ಸೇರಿಸಲ್ಪಟ್ಟಿಲ್ಲ. ಅಮೇರಿಕೆಗೊಳಪಟ್ಟ "ಹವಾಯಿ" ದ್ವೀಪದಲ್ಲಿ ೧೫೧೨೮೫ ಜಪಾನಿಯರು ನೆಲೆಸಿದ್ದಾರೆ. ಅಮೇರಿಕದ ಪಶ್ಚಿಮದ ಪಶ್ಚಿಮ ತೀರದಲ್ಲಿ ೧೧೨೪೧೮ ಜಪಾನಿಯರು ನೆಲೆಯೂರಿ, ಹಣ್ಣುಹಂಪಲು ವ್ಯವಸಾಯದಲ್ಲಿ

ನಿರತರಾಗಿದ್ದಾರೆ. ಇದರಂತೆ ಬ್ರಾಝಿಲ್‌ದಲ್ಲಿ ೧೭೩೪೬೦ ಜನರು ಕಾಲೂರಿದ್ದಾರೆ. ದಕ್ಷಿಣ ಅಮೇರಿಕೆಯಲ್ಲಿಯೂ ವಾಸಿಸಿದ್ದಾರೆ; ಆದರೆ ಸಂಖ್ಯೆ ಕಡಿಮೆ. ಒಟ್ಟಿನಲ್ಲಿ ಪರದೇಶಕ್ಕೆ ಎಷ್ಟೋ ಜನರು ತೆರಳಿದ್ದರಿಂದಲೂ, ಇಲ್ಲಿಯ ಪ್ರಬಲ ಸಮಸ್ಯೆಯನ್ನು ನಿರ್ಣಯಿಸಲು ಅಸಾಧ್ಯವೆಂದು ಕೈಬಿಡಬೇಕಾಗುತ್ತದೆ.

೩. ನಿರ್ಯಾತ ಸರಕುಗಳ ಪ್ರಗತಿ:—ಸಾಧಾರಣವಾಗಿ ಉದ್ಯೋಗಗಳಲ್ಲಿ ತೊಡಗಿರುವ ಜನಸಂಖ್ಯೆಯಲ್ಲಿ ೧೦೦ಕ್ಕೆ ೧೦ರಂತೆ ಪರದೇಶದೊಡನಿರುವ ವ್ಯಾಪಾರೋದ್ಯೋಗಗಳಲ್ಲಿ ತೊಡಗಿ ಹೊಟ್ಟೆಹೊರೆದುಕೊಳ್ಳುತ್ತಿದ್ದಾರೆ.

## ಜಪಾನಿನ ಪರದೇಶದ ವ್ಯಾಪಾರ (ಸಾವಿರ ಎನ್ನುಗಳ ಪ್ರಮಾಣ)

| ವರುಷ | ಆಯಾತ | ನಿರ್ಯಾತ |
|---|---|---|
| ೧೮೯೦ | ೮೧೭೨೯ | ೫೬೬೦೪ |
| ೧೯೦೦ | ೨೮೭೨೬೨ | ೨೦೪೪೩೧ |
| ೧೯೧೦ | ೪೬೪೨೩೪ | ೪೫೮೪೨೮ |
| ೧೯೨೦ | ೨೩೩೬೧೭೫ | ೧೯೪೮೩೯೫ |
| ೧೯೩೦ | ೧೫೪೬೦೫೧ | ೧೪೬೯೮೫೨ |
| ೧೯೩೫ | ೨೪೭೨೨೩೫ | ೨೪೯೯೦೭೨ |
| ೧೯೩೬ | ೨೭೬೩೬೮೧ | ೨೬೯೨೯೭೬ |

ನಿರ್ಯಾತದ ಕೈಗಾರಿಕೆಗಳೆಲ್ಲ ಪ್ರಗತಿಯಾದಂತೆ ಹೆಚ್ಚಿನ ಜನಸಂಖ್ಯೆಯ ಸಮಸ್ಯೆಯು ಕೆಲವೊಂದು ಮಟ್ಟಿಗೆ ಪರಿಹಾರವಾಗಬಹುದು. ಆದರೆ ಈ ನಿರ್ಯಾತದ ವ್ಯಾಪಾರಕ್ಕೆ ಅನೇಕ ತೊಂದರೆಗಳುಂಟು. ಇವರ ಕೈಗಾರಿಕೆಗೆ ಬೇಕಾಗುವ ಎಲ್ಲ ಕಚ್ಚಾ ಮಾಲು ಪರದೇಶದಿಂದಲೇ ಬರಬೇಕಾಗಿರುವುದು. ಒಮ್ಮೆ ಈ ಕಚ್ಚಾ ಮಾಲು ಬಾರದೆ ಹೋದಲ್ಲಿ ಇವರ ಕೈಗಾರಿಕೆಗಳೆಲ್ಲ ತೆಪ್ಪಗೆ ಕೂಡ್ರಬೇಕಾಗುತ್ತದೆ. ಆದ್ದರಿಂದಲೇ ಜಪಾನಿಯರು ಈ ಮಾಲನ್ನು

ಹೆಚ್ಚು ಪ್ರಮಾಣದಿಂದ ಸಂಗ್ರಹಿಸುವ ಯೋಜನೆಗಳನ್ನು ಕೈಕೊಂಡಿದ್ದಾರೆ. ಇಂದಿನ ಅಂತರ್‌ರಾಷ್ಟ್ರೀಯ ವ್ಯಾಪಾರದಲ್ಲಿ ಜಪಾನಕ್ಕೆ ಕೇವಲ ೧೦ಂಕ್ಕೆ ೩॥ ಯಷ್ಟು ಮಾತ್ರ ಸ್ಥಾನವಿದೆ. ಪರದೇಶದವರು ಇವರ ಸಾಮಾನುಗಳ ಮೇಲೆ ಹೇರಿದ ವಿಪರೀತ ಸುಂಕದ ಪರಿಮಾಣವು ಜಪಾನದ ಜನಸಂಖ್ಯೆಯ ಮೇಲೆ ಕೆಟ್ಟ ಪರಿಣಾಮವನ್ನುಂಟು ಮಾಡುತ್ತಲಿದೆ. ಕಳೆದ ಕೆಲವು ವರುಷ ಗಳಿಂದ ಚೀನಾ ದೇಶವು ಕೈಗಾರಿಕೆಯ ದೇಶವಾಗಲು ಕೈಕೊಂಡ ಉದ್ಯಮ ಗಳಿಂದ, ಜಪಾನವು ತನ್ನ ವ್ಯಾಪಾರಕ್ಕೆ ಅಡ್ಡಗಾಲು ಬಂತೆಂದು ಭಾವಿಸಿದ್ದ ಲ್ಲದೆ, ಘೋರ ಯುದ್ಧದ ಸ್ವರೂಪವನ್ನು ತಾಳಿಬಿಟ್ಟಿತು. ಚೀನಾದೇಶವನ್ನು ವಶಪಡಿಸಿಕೊಂಡು, ತನ್ನ ವ್ಯಾಪಾರ-ಉದ್ಯಮಗಳನ್ನು ಹೆಚ್ಚಿಸಿ, ಅವುಗಳ ಮುಖಾಂತರ ತನ್ನ ಪ್ರಜೆರಿಗೆ ಹೆಚ್ಚಿನ ಸೌಕರ್ಯಗಳನ್ನು ಒದಗಿಸಿಕೊಡುವ ದಕ್ಕಾಗಿ ಜಪಾನವು ಈಗ ಹೆಣಗುತ್ತಲಿದೆ. ಇದರ ಫಲಾಫಲವು ಯಾವ ರೀತಿಯಲ್ಲಿ ಪರಿಣಮಿಸುವದೋ ಹೇಳಲಿಕ್ಕೆ ಬರುವಂತಿಲ್ಲ.

೪. ಸಂತಾನನಿರೋಧ :—ಜಪಾನಿಯರು ಭಾರತೀಯರಂತೆ ಧರ್ಮ ಬದ್ಧರು. ಸಂತಾನನಿರೋಧವು ಅಮಾನುಷ ಕೃತಿಗಳಲ್ಲೊಂದೆಂದು ಇವರು ಭಾವಿಸುತ್ತಾರೆ. ೪-೫ ವರುಷಗಳ ಕೆಳಗೆ ಈ ಸಂತಾನನಿರೋಧ ಚಟು ವಟಿಕೆಯು ಸಾಧಾರಣವಾಗಿ ಸಾಗಿತ್ತು; ಆದರೆ ಇತ್ತೀಚೆ ಸರಕಾರದರು ಈ ಚಟುವಟಿಕೆಯನ್ನು ತಡೆಗಟ್ಟಿರುವರು. ಇಟಲಿ, ಜರ್ಮನಿಗಳಲ್ಲಿ ಯಂತೆ ಸಂತಾನ ಪಡೆದವರಿಗೆ ದೊರೆಯುವ ಸಹಾಯಗಳು ಇಲ್ಲಿ ದೊರೆ ಯುವದಿಲ್ಲ. ಆ ದೇಶಗಳಲ್ಲಿ ಬ್ರಹ್ಮಚಾರಿಗಳ ಮೇಲೆ ತೆರಿಗೆಯಿದ್ದಂತೆ ಜಪಾನಿನಲ್ಲಿ ತೆರಿಗೆಯಿರುವದಿಲ್ಲ. ಕಳೆದ ೧॥ ವರುಷದಿಂದ ನಡೆಯುತ್ತಿ ರುವ ಯುದ್ಧದಲ್ಲಿ ಅನೇಕ ಸಾವಿರ ಜಪಾನಿಯರು ಮಡದಿರುವರು. ಇನ್ನೂ ಯುದ್ಧವು ಹಾಗೆಯೇ ಕೆಲ ವರುಷಗಳ ವರೆಗೆ ಮುಂದರಿದರೆ ಮಾತ್ರ ಹೆಚ್ಚಿನ ಪ್ರಜಾಸಂಖ್ಯೆಯ ಸಮಸ್ಯೆಯು ತಾನೇ ಸ್ವಲ್ಪ ಪರಿಹಾರ ವಾದಂತಾಗುವುದು.

ಹೀಗೆ ಈ ಚತುರೋಪಾಯಗಳಿಂದ ಈ ಹೆಚ್ಚಾದ ಜನಸಂಖ್ಯೆಯ ಮಿಥ್ಯಾಪ್ರಶ್ನದ ಸಮಸ್ಯೆಯು ಸಂಪೂರ್ಣವಾಗಿ ಬಗೆಹರಿಯಲು ಸಾಧ್ಯವಿಲ್ಲ.

ಅದನ್ನು ಪರಿಹರಿಸಲು ಸರಕಾರವು ಸರ್ವತೋಪರಿಯಿಂದಲೂ ಹೆಣಗುತ್ತಲಿವೆ. ಅದರ ಫಲಿತಾಂಶವನ್ನು ಈಗಲೇ ಹೇಳಲಿಕ್ಕೆ ಬರುವಂತಿಲ್ಲ. ಆದರೂ ಪರಿಪೋಷಕ ಯೋಜನೆಗಳು ಕಾರ್ಯರೂಪದಿಂದ ಜರುಗಿದರೆ ಈ ಸಮಸ್ಯೆಯು ಎಷ್ಟೋ ಮಟ್ಟಿಗೆ ಪರಿಹಾರವಾಗುವುದರಲ್ಲಿ ಸಂದೇಹವಿಲ್ಲವೆಂದು ಹೇಳಬಹುದು.

---



ನಾಗೋಯಾಕಾ ಮಂದಿರ







ಮಂದಿರದಲ್ಲಿ ಕೆತ್ತಿದ

ಮೂರು ಮಂಗಗಳು



ನಾಗೋಯಾ ಕಿಲ್ಲೆಯು ಐದು ಅಂತಸ್ತಿನ ಅರಮನೆ
(೧೭ನೇ ಶತಮಾನದಲ್ಲಿ ಕಟ್ಟಿದ್ದು)





ರಾತ್ರಿವೇಳೆಯಲ್ಲಿ 'ನಿಯೋನ್' ದೀಪಗಳಿಂದ ಬೆಳಗುತ್ತಿರುವ
'ಗಿಂಜಾ' ರಾಜಬೀದಿಯು

# ಜಪಾನಿನ ರಾಜ್ಯಘಟನೆಯ ಕ್ರಮವಿಸ್ತಾರ



## ಆರನೆಯ ಪ್ರಕರಣ

## ರಾಜ್ಯಭಾರ



ಉದಾರ ಆಡಳಿತ (Liberal Government) ಮತ್ತು ಪ್ರಜಾಪ್ರಭುತ್ವ (Democracy)—ಇವು ಜಪಾನಿಗೆ ಹೊರಗಿನಿಂದ ಆಮದು ಮಾಡಲ್ಪಟ್ಟ ವಿಷಯಗಳು. ಕ್ರಿ. ಶ. ೬೬೦ರಿಂದ ೧೮೬೭ರ ವರೆಗೆ ಪ್ರಜೆಗಳು ಸರ್ವಾಧಿಕಾರಿಗಳ ಕೈಯಲ್ಲಿ ಕಲಿತ ಸ್ವಾಮಿಭಕ್ತಿಯ ಪಾಠವು ಇಂದಿನ "ಉದಾರ ಆಡಳಿತ"ದ ಪ್ರಗತಿಗೊಂದು ಅಡಚಣೆಯಾಗಿರುವುದು. ಇಲ್ಲಿಯ ಮೂಲ ಧರ್ಮವಾದ 'ಷಿನ್ಟೋ' (Shinto)ದ ಪ್ರಕಾರ, ಚಕ್ರವರ್ತಿಯು ದೇವಾಂಶ ಸಂಭೂತನು; ಅಲ್ಲದೆ ಆತನೇ ರಾಜ್ಯದ ಸರ್ವಾಧಿಕಾರಿಯು.* ಮೇಲ್ಕಂಡ ತತ್ವವು ಇಲ್ಲಿಯ ರಾಜಧರ್ಮದಲ್ಲಿ ಅಡಕವಾಗಿದ್ದರೂ ಜಪಾನ ರಾಜ್ಯವು ಹುಟ್ಟಿದಾಗಿನಿಂದ ನಿರಂಕುಶವಾಗಿ ರಾಜ್ಯವಾಳುವ ವಾಡಿಕೆಯು ಇಲ್ಲಿಯ ಅರಸರ ರಕ್ತನಾಳಗಳಲ್ಲಿ ಹರಿದುಕೊಂಡು ಬಂದಿಲ್ಲ। ಸದ್ಯಕ್ಕೆ ಜಪಾನಿನಲ್ಲಿ ಪ್ರಚುರದಲ್ಲಿರುವ ಸರಕಾರವನ್ನು ಪ್ರಪಂಚದ ಇನ್ನಾವ ರಾಜ್ಯದೊಡನೆಯೂ ಹೋಲಿಸಲು ಬರುವಂತಿಲ್ಲ. ಕಾರಣವೇನೆಂದರೆ, ಗ್ರೇಟ್ ಬ್ರಿಟನ್ನಿನ ಅರಸರಷ್ಟು ಇಲ್ಲಿಯ ಅರಸರು ಶಕ್ತಿಶೂನ್ಯರಲ್ಲ; ಅದರಂತೆ ಅಫಘಾನಿಸ್ತಾನ

---

* According to the shinto doctrine, tne Emperor is the sole authority and a living deity in the Country.

ಮೊದಲಾದ ಕಡೆಯ ಅರಸರಷ್ಟು ನಿರಂಕುಶರೂ ಅಲ್ಲ. ಜಪಾನಿನಲ್ಲಿಯೂ ಪ್ರಜಾಪ್ರತಿನಿಧಿಸಭೆಯೂ (Diet) ಕೆಲಸಮಾಡುತ್ತಲಿದೆ; ಆದರೆ ಅದರ ಅಧಿಕಾರವು ಅಮೇರಿಕ, ಇಂಗ್ಲಂಡ, ಫ್ರಾನ್ಸ್ ದೇಶಗಳಲ್ಲಿರುವ ಪ್ರಜಾಪ್ರತಿನಿಧಿ ಸಭೆಗಳ ಬರಿ ನೆರಳಲ್ಲದೆ ಬೇರೆ ಏನೂ ಇಲ್ಲ. ಜಪಾನು ದೇಶವು ಸ್ವಲ್ಪ ಸರ್ವಾಧಿಕಾರಿಗಳ ರಾಜ್ಯದಂತೆ (Dictatorship) ಕಂಡುಬಂದರೂ, ಈ ದೇಶದಲ್ಲಿ ಹಿಟ್ಲರ್, ಮುಸೊಲಿನಿ ಮಹಾಶಯರಂತಹರ ಹಾವಳಿಯಿಲ್ಲ. ಒಟ್ಟಿನಲ್ಲಿ ಜಪಾನಿಯರ ರಾಜ್ಯಾಡಳಿತವನ್ನು ಸ್ವಲ್ಪದರಲ್ಲಿ ಬಣ್ಣಿಸಬಹುದಾದರೆ, ಪ್ರಪಂಚದಲ್ಲಿರುವ ಎಲ್ಲಾ ರಾಜಕೀಯ ತತ್ವಗಳು ನಿರ್ದಿಷ್ಟ ಪರಿಮಾಣದಲ್ಲಿ ಒಟ್ಟಿಗೆ ಕೆಲಸವನ್ನು ಮಾಡಿಕೊಂಡು ಹೋಗುತ್ತಿಲಿವೆಯೆಂದರೆ ಸಾಕಾಗಿರುತ್ತದೆ.

ಕ್ರಿ. ಶ. ೧೮೬೭ರಲ್ಲಿ ಪಟ್ಟಕ್ಕೆ ಬಂದ ಮೇಜಿ ಚಕ್ರವರ್ತಿಗಳ ವಯಸ್ಸು ಕೇವಲ ೧೮ ಮಾತ್ರ ಆಗಿದ್ದಿತು. ರಾಜ್ಯದ ಪುನಃಸ್ಥಾಪನೆಯ ಕಾಲದಲ್ಲಿ ಸಹಾಯ ಮಾಡಿದ ಪ್ರಜೆಗಳ ಅನುಕೂಲಕ್ಕಾಗಿ, ಹುರಿ, ಕಿದೊ ಮೊದಲಾದ ಸಚಿವರ ಸಲಹೆಯಂತೆ ಐದು ಪ್ರಸಿದ್ಧ ಘೋಷಣೆಗಳನ್ನು ಚಕ್ರವರ್ತಿಗಳು ಮಾಡಿದರು. ಅವುಗಳಲ್ಲಿ ಪ್ರಜಾಪ್ರತಿನಿಧಿ ಸಭೆಯ ಕಾರ್ಯವು ರೂಪುಗೊಳ್ಳಬೇಕೆಂದು ಪ್ರಜೆಗಳು ಆತುರಪಡುತ್ತಿದ್ದರು. ಈ ಮಧ್ಯೆ ಆಸ್ಥಾನದಲ್ಲಿ ಅಧಿಕಾರಮದವು ತಲೆಗೇರಿದ ಕೆಲವು ಅಧಿಕಾರಿಗಳು, ಪ್ರಜಾಪ್ರತಿನಿಧಿ ಸಭೆಯಿಂದ ತಮ್ಮ ಅಧಿಕಾರಕ್ಕೆ ಭಂಗಬರುತ್ತದೆಂದು ತಿಳಿದು, ತರುಣರಾದ ಚಕ್ರವರ್ತಿಗಳಿಗೆ ದುರ್ಬೋಧೆಯನ್ನು ಮಾಡಲು ಪ್ರಾರಂಭಿಸಿದರು. ಇದರ ಪರಿಣಾಮವಾಗಿ, ಕ್ರಿ. ಶ. ೧೮೬೯ರಲ್ಲಿ ಚಕ್ರವರ್ತಿಗಳು, ಚುನಾಯಿತ ಸದಸ್ಯರ ಸಭೆಯನ್ನು ಕೂಡಿಸುವುದರ ಬದಲಾಗಿ ಪಾಳೆಯಗಾರರ ಸಂತತಿಯವರ ಸಭೆಯನ್ನು ಕರೆದು, ರಾಜ್ಯಾಡಳಿತದಲ್ಲಿ ಅವರ ಸಲಹೆಯನ್ನು ಕೇಳಲಾರಂಭಿಸಿದರು. ಈ ನಡೆವಳಿಕೆಯು ಚಕ್ರವರ್ತಿಗಳ ಮೂಲ ವಾಗ್ದಾನಕ್ಕೆ ವಿರುದ್ಧವೆಂದು ಪ್ರಜೆಗಳು ವಿಜ್ಞಾಪಿಸಿಕೊಳ್ಳಲು, ಸರಕಾರವು ತಾನು ಮಾಡಿದುದೇ ಸರಿಯೆಂದು ಭುಜತಟ್ಟಿಕೊಂಡಿತು.

ಸರಕಾರವು ತನ್ನ ಕಾಲಿಗೆ ತಾನೇ ನಮಸ್ಕಾರಮಾಡಿಕೊಂಡಂತೆಲ್ಲಾ,

ಪ್ರಜೆಗಳು 'ಪ್ರಜಾಪ್ರತಿನಿಧಿಸಭೆ'ಯ ನಿರ್ಮಾಣಕ್ಕಾಗಿ ಚಳವಳಿಯನ್ನು ಹೆಚ್ಚಿಸಿಕೊಂಡು ಬಂದರು. ಹಿಂದೆ ಚಕ್ರವರ್ತಿಗಳ ಪಕ್ಷ ವಹಿಸಿ, ರಾಜ್ಯ ಪುನಃಸ್ಥಾಪನೆಯ ಕಾರ್ಯದಲ್ಲಿ ಹೆಚ್ಚಿನ ಸಹಾಯಮಾಡಿದ 'ಹಿತಗಾಕಿ' ಎಂಬ ನಾಯಕನು, ಇತರ ಸಚಿವರು ಪ್ರಜಾಪ್ರತಿನಿಧಿಸಭೆಯ ಸ್ಥಾಪನೆಗೆ ವಿರೋಧವಾಗಿ ಕೆಲಸಮಾಡಲಾರಂಭಿಸಿದ ಕ್ಷಣವೇ ತನ್ನ ಆಸ್ಥಾನದ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು, ಪ್ರಜಾಪಕ್ಷಕ್ಕೆ ಸೇರಿ, ಸರಕಾರದ ವಿರುದ್ಧವಾಗಿ ಚಳವಳಿಗೆ ಪ್ರಾರಂಭಿಸಿದನು. ಈ ಮಧ್ಯೆ ಪ್ರಜೆಗಳು ಪರದೇಶದಲ್ಲಿ ಪ್ರಚಾರವಾಗಿರುವ ಪುಸ್ತಕಗಳ ಮುಖಾಂತರ ಉದಾರ ರಾಜ್ಯಭಾರದ ಹೆಚ್ಚಿನ ತತ್ವಗಳನ್ನು ತಿಳಿದುಕೊಂಡುದರ ಫಲವಾಗಿ, ತಮ್ಮ ದೇಶದಲ್ಲಿಯೂ ಉದಾರಮತವಾಗಿ ಸರಕಾರವನ್ನು ಸ್ಥಾಪಿಸಬೇಕೆಂಬ ಆಶೆಯು ಬೆಳೆಯಲಾರಂಭಿಸಿತು. ಇದಕ್ಕೆ Todd's Parliamentary Government in England ಮತ್ತು Sir Erokim May's Parliamentary Practice ಎಂಬ ಪುಸ್ತಕಗಳು ವಿಶೇಷ ಸಹಾಯಕವಾದುವು.*

ಚಕ್ರವರ್ತಿಯ ಅಧಿಕಾರವನ್ನು ಹೆಚ್ಚಿಸುವ ದೃಷ್ಟಿಯಿಂದ ಆಸ್ಥಾನದ ಸತ್ತಾಧೀಶರು (Burocrats) ಷಿನ್ಟೊ ಧರ್ಮವನ್ನು ಮರೆಹೊಕ್ಕರು. ಷಿನ್ಟೊ ಧರ್ಮದ ಪ್ರಕಾರ ಚಕ್ರವರ್ತಿಯ ಅಧಿಕಾರವು ದೇವದತ್ತವಾಗಿದ್ದರೂ (The divine right of the Emperor), ಕಾರ್ಯರೂಪದಲ್ಲಿ ೧೨ ಶತಮಾನಗಳ ವರೆಗೆ ಆ ತತ್ವವು ಗಾಢನಿದ್ರೆಯನ್ನನುಭವಿಸುತ್ತಿದ್ದಿತು. ಬೌದ್ಧಧರ್ಮವು ಷಿನ್ಟೊಧರ್ಮದಂತೆ ಚಕ್ರವರ್ತಿಗೆ ಹೆಚ್ಚಿನ ಅಧಿಕಾರವನ್ನು ಒದಗಿಸಿಕೊಡಲು ಅನುಕೂಲವಿರಲಿಲ್ಲವಾದುದರಿಂದ, ಅದು ರಾಜಾಶ್ರಯವನ್ನು ಕಳೆದುಕೊಂಡಿತು. ಬೌದ್ಧಗ್ರಂಥಗಳು ಹಲವು ಸಲ ಸುಡಲ್ಪಟ್ಟವು. ಯಾವ ಬೌದ್ಧಧರ್ಮವು ಹಲವು ಶತಮಾನಗಳ ಪರಿಯಂತರ ಜಪಾನಿಗೆ ವಿವಿಧ ರೀತಿಯಲ್ಲಿ ಸಹಾಯ ಮಾಡಿತೋ ಅದೇ ಧರ್ಮವು ಚಕ್ರವರ್ತಿಗಳ ಅಧಿಕಾರಕ್ಕೆ ಮಾನ್ಯತೆ ಕೊಡಲಿಲ್ಲವೆಂಬ ನೆಪದಿಂದ, ಅಧಿಕಾರಿಗಳಿಂದ ತಿರಸ್ಕರಿಸಲ್ಪಟ್ಟಿತು.

---

* Dr. Sakuzo Yoshino: Politics in Japan.

ಇಂದಿಗೂ ಸೂರಕ್ಕೆ ೯೦ರಷ್ಟು ಜನಸಂಖ್ಯೆಯು ಬೌದ್ಧಧರ್ಮಾವಲಂಬಿಯಾಗಿದ್ದರೂ ರಾಜಧರ್ಮವು ಷಿಸ್ಟೊ ಆಗಿಯೇ ಉಳಿದಿರುವುದು.

ದೇಶಭಕ್ತ **ಹಿತಗಾಕಿಯ** ನಾಯಕತ್ವದಲ್ಲಿ ಜಪಾನಿನ ೨೪ ಪ್ರಾಂತ್ಯಗಳ ೨೭ ಪ್ರಜಾಸಂಸ್ಥೆಗಳು ಪ್ರಜಾಸರಕಾರದ ಸ್ಥಾಪನೆಯ ಬಗ್ಗೆ ಚಕ್ರವರ್ತಿಗಳಿಗೆ ಒಂದು ಮನವಿಯನ್ನು, ಕಳಿಸಿದವು. ಆದರೆ ಆಸ್ಥಾನದ ಸತ್ತಾಧಾರಿಗಳು, ಪ್ರಜೆಗಳು ಚಕ್ರವರ್ತಿಗೆ ಅರ್ಜಿಯನ್ನು ಕಳಿಸುವ ಅಧಿಕಾರವನ್ನು ಪಡೆದಿಲ್ಲವೆಂಬ ನೆಪದ ಮೇಲೆ, ಅದು ತಿರಸ್ಕೃತವಾಗುವಂತೆ ಮಾಡಿದರು. ಅಲ್ಲಿಂದಾಚೆಗೆ ಪ್ರಜೆಗಳ ಚಳವಳಿಯು ಘೋರರೂಪವನ್ನು ತಾಳಿತು. ಚಳವಳಿಯನ್ನು ತಡೆಗಟ್ಟುವುದಕ್ಕಾಗಿ ಸರಕಾರವು ಅನೇಕ ಕ್ರೂರ ಕಾಯಿದೆಗಳನ್ನು ಜಾರಿಯಲ್ಲಿ ತಂದಿತು. ಸಾವಿರಗಟ್ಟಲೆ ಜನರು ಜೈಲುಯಾತ್ರೆ ಮಾಡುವುದು ನಿತ್ಯ ಕಟ್ಟಳೆಯಾಯಿತು. ಕ್ರಿ. ಶ. ೧೮೭೭ರಲ್ಲಿ ಪ್ರೆಸ್ ಕಾನೂನು ಜಾರಿಗೆ ಬಂದು, ಪ್ರಬಲವಾಗಿದ್ದ ವರ್ತಮಾನಪತ್ರಿಕೆಗಳನ್ನು ಆಹುತಿಗೊಂಡಿತು. ಸ್ವಲ್ಪದರಲ್ಲಿ ಹೇಳುವುದಾದರೆ, ಕ್ರಿ. ಶ. ೧೭೯೨ರ ರಾಜಕೀಯ ಆಂದೋಲನದಲ್ಲಿ ಪ್ಯಾರಿಸ್ ಪಟ್ಟಣವು ಹೇಗಿದ್ದಿತೋ, ಆದರಂತೆ ಸನ್ ೧೮೭೭ರಲ್ಲಿ ಟೋಕಿಯೋ ನಗರವಿದ್ದಿತು.

ಚಳವಳಿಯು ಉಗ್ರರೂಪವನ್ನು ತಾಳಲು, ಸರಕಾರಕ್ಕೆ ಬೇರೆ ಮಾರ್ಗ ತೋಚದೆ, ಅದು "**ಇತೊ ಸಚಿವ**"ನನ್ನು ಅಮೇರಿಕಾ ದೇಶಕ್ಕೆ, ಪ್ರಜಾಸಂಸ್ಥೆಯ ಶಾಸನವನ್ನು ಅರಿತುಕೊಂಡು ಬರುವುದಕ್ಕಾಗಿ ಕಳುಹಿಸಿತು. ಇತೊ ಸಚಿವನಿಗೆ ಅಮೇರಿಕಾ ದೇಶದ ಉಗ್ರರೂಪದ ಪ್ರಜಾಪ್ರಭುತ್ವ ರೀತಿಯು ಸರಿಬೀಳದಿದ್ದುದರಿಂದ, ಅವನನ್ನು ಯುರೋಪಿನ ಪ್ರಜಾಪ್ರತಿನಿಧಿ ಸಭೆಗಳ ಸ್ವರೂಪವನ್ನು ತಿಳಿದುಕೊಂಡು ಬರಲು ಮತ್ತೆ ಕಳುಹಿಸಲಾಯಿತು. ಈತನು ಮುಖ್ಯವಾಗಿ ಇಂಗ್ಲೆಂಡಿನ ಪಾರ್ಲಿಮೆಂಟಿನ ಶಾಸನವನ್ನು ಅಭ್ಯಾಸಿಸುವುದನ್ನು ಬಿಟ್ಟು, ತನ್ನ ೧೮ ತಿಂಗಳ ಕಾಲವನ್ನು ಜರ್ಮನಿಯಲ್ಲಿಯೇ ಕಳೆದನು. ಜರ್ಮನಿಯಲ್ಲಿ ಬಿಸ್ಮಾರ್ಕನ ಸ್ನೇಹವನ್ನು ಸಂಪಾದಿಸಿ, ಆ ದೇಶದ ಶಾಸನವನ್ನೇ ಜಪಾನಿನಲ್ಲಿ ಸ್ಥಾಪಿಸುವ ಬಗ್ಗೆ ಸಂಕಲ್ಪಮಾಡಿಕೊಂಡು ಮರಳಿ ಬಂದುಬಿಟ್ಟನು. ಇಂಗ್ಲಂಡಿನಲ್ಲಿ ಪಾರ್ಲಿಮೆಂಟಿನ ಶಾಸನಗಳನ್ನು

ಅಭ್ಯಾಸಿಸುವುದರ ಬದಲಾಗಿ, ಅಲ್ಲಿ ಜಾರಿಯಲ್ಲಿದ್ದ "ಬಿರುದುಬಾವಲಿ"ಗಳ ವಿಷಯವನ್ನು ತಿಳಿದುಕೊಂಡು, ಜಪಾನಿಗೆ ಬಂದಮೇಲೆ ಅವುಗಳನ್ನು ಜಾರಿಗೆ ತರಬೇಕೆಂದು ಚಕ್ರವರ್ತಿಗಳಿಗೆ ಸಲಹೆ ಕೊಟ್ಟನು. ಯಾವ ಸರಕಾರವು ಕ್ರಿ. ಶ. ೧೮೬೮ರಲ್ಲಿ, ಮೇಲುಕೀಳೆಂಬ ಭಾವವನ್ನು ಕಿತ್ತೊಗೆದು ಸಮಭಾವನೆಯನ್ನು ಬೆಳೆಯಿಸುವುದಕ್ಕಾಗಿ 'ಬಿರುದುಬಾವಲಿ'ಗಳ ಆಡಂಬರವನ್ನು ತೆಗೆದೆಸೆಯಿತೋ, ಅದೇ ಸರಕಾರವು ಇತೊ ಸಚಿವನ ಸಲಹೆಯ ಮೇರೆಗೆ, ಸನ್ ೧೮೮೪ರಲ್ಲಿ, ದರಬಾರದ Prince, Count, Baron Viscount ಇ. 'ಪದವಿ-ಪುರಸ್ಕಾರ'ಗಳ ಪದ್ಧತಿಯನ್ನು ಜಾರಿಗೆ ತಂದಿತು.

ಸದ್ಯಕ್ಕೆ ಜಪಾನಿನಲ್ಲಿ ಜಾರಿಯಲ್ಲಿರುವ ರಾಜ್ಯಶಾಸನವು(Constitution) ಚಕ್ರವರ್ತಿಗಳು ದಯಪಾಲಿಸಿದ ಪ್ರಸಾದವಲ್ಲದೆ, ಅರಸರಿಂದ ಕಸಿದುಕೊಂಡ ಶಾಸನವಲ್ಲ. ಪ್ರಪಂಚದಲ್ಲಿ ಜಾರಿಯಲ್ಲಿರುವ ರಾಜಶಾಸನಗಳಲ್ಲಿ ಜಪಾನಿಯರ ಶಾಸನವೇ ಪ್ರಜೆಗಳಿಗೆ ಆಡಳಿತದಲ್ಲಿ ಹೆಚ್ಚಿನ ಅಧಿಕಾರವನ್ನು ಕೊಡದೆ ಇರುವುದು. ಈ ರೀತಿ ಪ್ರಜಾಪ್ರತಿನಿಧಿ ಸಭೆಯ ಶಕ್ತಿಯು ಶೂನ್ಯವಾಗುವುದಕ್ಕೆ, ಇತೊ ಸಚಿವನೇ ಕಾರಣನು. ಈತನಿಗೆ ಪ್ರಜೆಗಳು ರಾಜ್ಯಸೂತ್ರಗಳನ್ನು ವಹಿಸುವುದು ಸಹಿಸದ ಕೆಲಸವಾಗಿದ್ದಿತು.

ಜಪಾನಿನ ಪ್ರಜಾಪ್ರತಿನಿಧಿಸಭೆಯ ಶಾಸನಗಳು, ಜರ್ಮನಿ ಮತ್ತು ಹಿಂದಿನ ಪ್ರಷಿಯಾ ಶಾಸನಗಳನ್ನು ಹೋಲುತ್ತವೆ. ಇದರ ಶಾಸನಗಳು ರೂಪಗೊಳ್ಳುವುದಕ್ಕೆ, ಜರ್ಮನಿಯ ಗತಿಸಿದ ಪ್ರೊ. ಅರವೆನ್ ರೊಸಲ್‌ರ್ ಎಂಬವನು ಹೆಚ್ಚು ಸಹಾಯ ಮಾಡಿದನು. ಒಟ್ಟು ಶಾಸನದ ಎಪ್ಪತ್ತಾರು ವಿಧಗಳನ್ನು ಪರಿಶೋಧಿಸುತ್ತಾ ಹೋದರೆ, ಅವುಗಳಲ್ಲಿ ನಲವತ್ತಾರು ಪ್ರಷಿಯದ ವಿಧಿಗಳು, ಹದಿನೆಂಟು ಜರ್ಮನಿಯ ವಿಧಿಗಳು, ಮತ್ತು ಒಂಬತ್ತು ವಿಧಿಗಳು ಇತರ ದೇಶಗಳಿಂದ ಎರವು ತರಲ್ಪಟ್ಟವುಗಳೆಂಬ ವಿಷಯವು ವ್ಯಕ್ತವಾಗುತ್ತದೆ, ಎಪ್ಪತ್ತಾರು ಶಾಸನಗಳಲ್ಲಿ ಮೂರು ಮಾತ್ರ ಜಪಾನಿಯರ ಸ್ವಂತದವು. ಈ ರೀತಿ ಪರದೇಶಗಳ ಶಾಸನಗಳನ್ನು ಒಟ್ಟುಗೂಡಿಸಿ, "ಜಪಾನಿನ ಪ್ರಜಾಪ್ರತಿನಿಧಿ ಸಭೆ"ಯ ಶಾಸನವನ್ನು ತಯಾರು ಮಾಡಿದ ಬಗ್ಗೆ ಡಾಕ್ಟರ್ ಕ್ಯೂಗಲಿಯವರು ಈ ರೀತಿ ಅಭಿಪ್ರಾಯಪಡುತ್ತಾರೆ.

Observing so heroic an effort to cut Japan's newly adopted constitutional costume upon German lines, one naturally asks how successful her tailors were in the transfer of style.

## ರಾಜಸಭೆ (Diet)

ರಾಜಸಭೆಯು ಎರಡು ಮಂದಿರಗಳನ್ನು ಒಳಗೊಂಡಿದೆ. (೧) ಪ್ರಜಾ ಪ್ರತಿನಿಧಿಸಭೆ(House of Representatives),ಚುನಾಯಿಸಲ್ಪಟ್ಟ ಸದಸ್ಯರು. (೨) ಶ್ರೀಮಂತರ ಸಭೆ (House of Peers), ನಾಮಕರಣ ಹೊಂದಿದ ಸದಸ್ಯರು. ರಾಜಸಭೆಯನ್ನು ತೆರೆಯುವ, ಮುಂದುವರಿಸುವ, ತಾತ್ಕಾಲಿಕ ವಾಗಿ ಮುಚ್ಚುವ ಅಧಿಕಾರವು ಚಕ್ರವರ್ತಿಗಳ ಕೈಯಲ್ಲಿದೆ. (According to the Constitution the Emperor convokes the Imperial Diet, opens, closes, prorogues it and dissolves the House of Representatives.) ಶಾಸನಸಭೆಯ ಅಧಿಕಾರವು ಬಹಳವಮಟ್ಟಿಗೆ ಬಂಧಿಸ ಲ್ಪಟ್ಟು, ಅದು ಕೆಳಗೆ ಕಾಣಿಸಿರುವ ಅಧಿಕಾರಗಳನ್ನು ಮಾತ್ರ ಒಳಗೊಂಡಿದೆ. (೧) ಪ್ರಜೆಗಳಿಂದ ಅರ್ಜಿಯನ್ನು ಪಡೆಯುವ ಅಧಿಕಾರ, (೨) ಚಕ್ರವರ್ತಿ ಗಳಿಗೆ ಬಿನ್ನೈಸಿಕೊಳ್ಳುವ ಅಧಿಕಾರ, (೩) ಆಡಳಿತದ ಬಗ್ಗೆ ಮಂತ್ರಿಗಳಿಗೆ ಪ್ರಶ್ನೆಗಳನ್ನು ಕೇಳುವ ಅಧಿಕಾರ, ಮತ್ತು (೪) ಹಣಕಾಸಿನ ಖರ್ಚಿನ ಉಸ್ತುವಾರಿ. ಈ ರೀತಿಯಲ್ಲಿ ಇಲ್ಲಿಯ ಪ್ರಜಾಪ್ರತಿನಿಧಿಸಭೆಯು ಚಕ್ರವರ್ತಿ ಗಳ ಆಡಳಿತಕ್ಕೆ ಸಹಾಯ ಮಾಡುವ ಸಭೆಯು ಅಲ್ಲದೆ, ಸ್ವತಂತ್ರದ ಸಭೆಯು ಅಲ್ಲ. ಸಭೆಯು ಮಂಜೂರು ಮಾಡಿದ ಠರಾವನ್ನು ಕಿತ್ತೊಗೆಯುವ ಅಧಿಕಾರವನ್ನು ಚಕ್ರವರ್ತಿಗಳು ಪಡೆದಿರುವರು. ಚಕ್ರವರ್ತಿಗಳ ಅಧಿಕಾರ ವನ್ನು ಕಿತ್ತೊಗೆಯುವುದಕ್ಕೆ ಇಲ್ಲಿಯ ಶಾಸನಸಭೆಗೆ ಯಾವ ತರಹದ ಮಾರ್ಗವೂ ಇರುವುದಿಲ್ಲ. ಇಂತಹ ಸ್ಥಿತಿಯಲ್ಲಿ ಜಪಾನಿನ ಪ್ರಜಾಪ್ರನಿಧಿ ಸಭೆಯು ಅಮೇರಿಕದ ಕಾಂಗ್ರೆಸ್, ಇಂಗ್ಲಂಡಿನ ಪಾರ್ಲಿಮೆಂಟ್, ಫ್ರಾನ್ಸಿನ ಚೇಂಬರ್ಸ್‌ಗಳ ಛಾಯೆಯೇ ಆಗಿರುವುದಲ್ಲದೆ ಅನ್ಯಥಾ ಇಲ್ಲ.

ಜಪಾನಿ ರಾಜ್ಯಶಾಸನದ ತತ್ವದ ಪ್ರಕಾರ, ಸರಕಾರದ ರಾಜನೀತಿ ಯನ್ನು ನಿರ್ಧರಿಸುವುದರಲ್ಲಿ ಜನತೆಗೆ ಅತ್ಯಲ್ಪ ಅವಕಾಶವುಂಟು. ಇತರಾಕಿ

ಮತ್ತು ಓಕುಮುರ ಪ್ರಜಾಪಕ್ಷಗಳ ಅಪ್ರತಿಮ ಮುಂದಾಳುಗಳು. ಇವರು ಮೇಜಿಸರಕಾರದ ಪುನಃಸ್ಥಾಪನೆಗೆ ತುಂಬಾ ಸಹಾಯವನ್ನು ಮಾಡಿದವರು; ಆದರೆ ಸರಕಾರವು ಪ್ರಜೆಗಳ ಕೋರಿಕೆಯನ್ನು ತಿರಸ್ಕರಿಸಲು, ತಮ್ಮ ಉದ್ಯೋಗಗಳಿಗೆ ರಾಜೀನಾಮೆಯನ್ನು ಕೊಟ್ಟು, ಸಾರ್ವಜನಿಕ ಸೇವೆಗೆ ನಿಂತ ವೀರರು. ಸದ್ಯದಲ್ಲಿ ಜಾರಿಯಲ್ಲಿರುವ ಶಾಸನ ಸಭೆಯು ಪಡೆದಿರುವ ಯತ್ಕಿಂಚಿತ್ ಅಧಿಕಾರವಾದರೂ **ಇತಗಾಕಿ, ಓಕುಮುರ** ಸಾಹಸದಿಂದ ಪ್ರಾಪ್ತವಾದುದಲ್ಲದೆ ಅನ್ಯಥಾ ಇಲ್ಲ. ಇವರು ಸನ್ ೧೮೮೬ರಲ್ಲಿ ಸ್ಥಾಪಿಸಿದ ಪ್ರಜಾಪಕ್ಷಗಳ ಚಳುವಳಿಯ ಫಲವಾಗಿ ಸನ್ ೧೮೮೯ರಲ್ಲಿ ರಾಜ್ಯಶಾಸನವು (Constitution) ರೂಪಗೊಂಡಿತು.

## ಪ್ರಜಾಪಕ್ಷಗಳು

ಶಾಸ್ತ್ರೋಕ್ತವಾಗಿ, ಸನ್ ೧೮೮೧ರಲ್ಲಿ ಇತಗಾಕಿಯ ನೇತೃತ್ವದಲ್ಲಿ **ಜ್ಯೆತೋ** ಎಂಬ ಹೆಸರಿನಲ್ಲಿ, ಒಂದು ಪ್ರಜಾಪಕ್ಷವು ಸ್ಥಾಪಿಸಲ್ಪಟ್ಟಿತು. (ಸದ್ಯಕ್ಕೆ ಇದು ಸೋಯುಕಾಯಿ ಎಂಬ ಹೆಸರನ್ನು ಪಡೆದುಕೊಂಡು, **೪೫೦** ಮಂದಿ ಸದಸ್ಯರ ಪ್ರಜಾಪ್ರತಿನಿಧಿ ಸಭೆಯಲ್ಲಿ ೨೦.೨ ಸ್ಥಾನಗಳನ್ನು ಪಡೆದು ಕೊಂಡಿವೆ.) ಇದರಂತೆಯೇ ಸನ್ ೧೮೮೨ರಲ್ಲಿ, ಓಕುಮುನ ನೇತೃತ್ವದಲ್ಲಿ, **ಕೈ ಷಿನ್ ತೋ** ಎಂಬ ಪ್ರಜಾಪಕ್ಷವು ಸ್ಥಾಪಿಸಲ್ಪಟ್ಟಿತು. (ಸದ್ಯಕ್ಕೆ ಇದು ಮಿನ್ ಷಿತೊ ಎಂಬ ಹೆಸರಿನಲ್ಲಿ ಪ್ರಸಿದ್ಧಿ ಪಡೆದು ಶಾಸನಸಭೆಯಲ್ಲಿ, ೧೮೨ ಸ್ಥಾನಗಳನ್ನು ಒಳಗೊಂಡಿದೆ.) ಪ್ರಜಾಪ್ರತಿನಿಧಿಸಭೆಯಲ್ಲಿ, ಯಾವ ಪಕ್ಷವು ಪ್ರಬಲವಾಗಿದ್ದರೂ ಅದರ ಅಧಿಕಾರಿಗಳು ಮರ್ಯಾದಿತವೂ ನಿರ್ದಿಷ್ಟವೂ ಆಗಿವೆ. ಮಂತ್ರಿಮಂಡಲಗಳನ್ನು (Cabinet) ಚಕ್ರವರ್ತಿಗಳೇ ನಿಯಮಿಸುವುದರಿಂದ, ಚುನಾಯಿತ ಸದಸ್ಯರಿಗೆ ಮಂತ್ರಿಮಂಡಲದ ರಚನೆಯಲ್ಲಿಯಾಗಲಿ ಅದನ್ನು ವಜಾಮಾಡುವ ವಿಷಯದಲ್ಲಿಯಾಗಲಿ ಯಾವ ತರಹದ ಅಧಿಕಾರವೂ ಇರುವುದಿಲ್ಲ. ಚಕ್ರವರ್ತಿಗಳಿಂದ ನಾಮಕರಣ ಹೊಂದಿದ ಮಂತ್ರಿಗಳು, ಚಕ್ರವರ್ತಿಗಳಿಗೆ ಮಾತ್ರ ಜವಾಬ್ದಾರರಲ್ಲದೆ ಸದಸ್ಯರಿಗೆ ಜವಾಬ್ದಾರರಲ್ಲ. ಈ ಅಧಿಕಾರದ ದೆಸೆಯಿಂದಲೇ ಅನೇಕ ವೇಳೆ ಸದಸ್ಯರು ಕೇಳುವ ಪ್ರಶ್ನೆಗಳಿಗೆ ಮಂತ್ರಿಗಳು ಉತ್ತರವೀಯುವುದನ್ನು ನಿರಾಕರಿಸು

ವುದು. ಸದಸ್ಯರಿಗೆ ಪ್ರಶ್ನೆಗಳನ್ನು ಕೇಳುವ ಅಧಿಕಾರವು ಇದ್ದರೂ, ಉತ್ತರಗಳನ್ನು ಪಡೆಯುವ ಅಧಿಕಾರವು ಇಲ್ಲ. ಒಂದು ವೇಳೆ ಸದಸ್ಯರು ಸರಕಾರವು ತರುವ ಠರಾವನ್ನು ಅಂಗೀಕರಿಸದೆ ಇದ್ದರೆ, ಮುಖ್ಯಮಂತ್ರಿಯು ಚಕ್ರವರ್ತಿಗಳ ಅನುಮತಿಯನ್ನು ಪಡೆದು, ಸಭೆಯನ್ನು ವಿಸರ್ಜನೆ (dissolve) ಮಾಡುವ ವಾಡಿಕೆಯೂ ಜಪಾನಿನಲ್ಲಿ ರೂಢವಾಗಿದೆ. ಇದುವರೆಗಿನ ೭೧ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನಗಳಲ್ಲಿ, ೨೫ ಸಾರಿ ಈ ರೀತಿ ಅದು ವಿಸರ್ಜನೆ ಹೊಂದಿರುವುದು. ಸನ್ ೧೯೩೭ರ ಜೂನ ತಿಂಗಳಲ್ಲಿ, ಮುಖ್ಯಮಂತ್ರಿಗಳಾಗಿದ್ದ ಜನರಲ್ ಹಯಾಷಿಯವರು ತಂದ ಠರಾವು ಸಭೆಯ ಒಪ್ಪಿಗೆಯನ್ನು ಪಡೆಯದಿದ್ದುದರಿಂದ, ಇಡಿ ಸಭೆಯನ್ನೆ ಅವರು ವಿಸರ್ಜನೆ ಮಾಡಿಸಿದರು; ಆದರೆ ಜುಲೈ ತಿಂಗಳಲ್ಲಿ ನಡೆದ ಚುನಾವಣೆಯಲ್ಲಿ ಹಿಂದಿನ ಸದಸ್ಯರೆ ಆರಿಸಿ ಬಂದುದರಿಂದ ಮತ್ತೊಂದು ಸಾರೆ ಸಭೆಯನ್ನು ವಿಸರ್ಜನೆ ಮಾಡುವ ಅಧಿಕಾರವನ್ನು ಮುಖ್ಯಮಂತ್ರಿಗಳು ಪಡೆದಿದ್ದರೂ, ದೇಶದ ಶಾಂತಿಯ ಪರಿಪಾಲನೆಗಾಗಿ ಸಭೆಯನ್ನು ವಿಸರ್ಜನೆ ಮಾಡದೆ, ಅವರ ಮಂತ್ರಿಮಂಡಲವೆ ರಾಜೀನಾಮೆಯನ್ನು ಕೊಟ್ಟಿತು. ಶಾಸನಸಭೆಯಲ್ಲಿ ಚಕ್ರವರ್ತಿಗಳ ಆಶೀರ್ವಾದ ಪಡೆದ ಠರಾವುಗಳು ಹೆಚ್ಚು ಚರ್ಚೆಯಿಲ್ಲದೆ ಮಂಜೂರಾಗುವವು. ಅನೇಕ ವೇಳೆ ಮಂತ್ರಿಗಳು, ಠರಾವುಗಳ ಒಪ್ಪಿಗೆಗಾಗಿ ಚಕ್ರವರ್ತಿಗಳ ಹೆಸರನ್ನು ದುರುಪಯೋಗಿಸಿಕೊಳ್ಳುತ್ತಾರೆ. ಇಂಥ ಸಮಯದಲ್ಲಿ ಸದಸ್ಯರು ಠರಾವುಗಳನ್ನು ಪುಷ್ಟೀಕರಿಸುವ ಅಥವಾ ಧಿಕ್ಕರಿಸುವ ವಿಷಯವನ್ನು ತೀರ್ಮಾನಿಸಬೇಕಾದರೆ ಪ್ರಾಣಸಂಕಟದ ಮಾತೇ ಆಗುವುದು.

ಸನ್ ೧೮೯೦ರಿಂದ ೧೯೦೦ರವರೆಗೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಮಂತ್ರಿಮಂಡಲದಲ್ಲಿ ಪ್ರವೇಶಿಸಲು ಅಧಿಕಾರ ಪಡೆದಿರಲಿಲ್ಲ. ಆದರೆ ಸನ್ ೧೯೦೦ರಲ್ಲಿ **ಯಮಗಾತ** ಮಂತ್ರಿಮಂಡಲದಲ್ಲಿ, ಹಣಕಾಸಿನ ಮಂತ್ರಿಪದವು ಸಭೆಯಲ್ಲಿಯ ಮುಖ್ಯವಾದ ಪಂಗಡಕ್ಕೆ ಕೊಡಲ್ಪಟ್ಟಿತು. ಅನಂತರ ಸ್ಥಾಪನವಾದ ಪ್ರತಿ ಮಂತ್ರಿಮಂಡಲದಲ್ಲಿಯೂ ಪ್ರಜಾಪಕ್ಷಕ್ಕೆ ಎರಡು ಮೂರು ಮಂತ್ರಿಸ್ಥಾನಗಳು ಸಿಕ್ಕುತ್ತಿದ್ದವು. ಸನ್ ೧೯೧೭ರಲ್ಲಿ ಮಾತ್ರ ಮುಂದೆ ಕೊಲೆಮಾಡಲ್ಪಟ್ಟ **ಹರ**ರವರು, ಸದಸ್ಯರಿಂದಲೇ ಮಂತ್ರಿಮಂಡಲ

ವನ್ನು ರಚಿಸಿದರು. ಇವರ ಆಡಳಿತದಲ್ಲಿ ಅನೇಕ ಪ್ರಜಾಕ್ಷೇಮದ ಠರಾವುಗಳು ಅಂಗೀಕೃತವಾದವು. ಆದರೆ ದೇಶವು ಪ್ರಜಾಪ್ರಭುತ್ವದಲ್ಲಿ ಪ್ರಗತಿಯನ್ನು ಹೊಂದುತ್ತಿರುವುದನ್ನು ನೋಡಿ ಸಹಿಸಲಾರದೆ, ಒಬ್ಬ ಉಗ್ರ ದೇಶಪ್ರೇಮಿಯಾದ ಯುವಕನು ಮುಖ್ಯಮಂತ್ರಿಗಳಾಗಿದ್ದ 'ಹರ'ರನ್ನು ಕೊಲೆ ಮಾಡಿದನು. ಅಲ್ಲಿಂದಿಂದಿನ ವರೆಗೂ ಮುಖ್ಯಮಂತ್ರಿ ಪದವಿಗಳನ್ನು ಅನುಭವಿಸಿದವರಲ್ಲಿ ಹೆಚ್ಚಿನವರು ಕೊಲೆಗೀಡಾಗಿರುವರು. ಜಪಾನಿನ ಮುಖ್ಯಮಂತ್ರಿತ್ವವನ್ನು ವಹಿಸಿದರೆ, ಅವನಿಗೆ ಸಾವು ಇಂದಿಲ್ಲ ನಾಳೆ ಇರಲೇಬೇಕು. ಇದಕ್ಕಾಗಿಯೇ ಇಲ್ಲಿಯ ಇನ್ಶ್ಯೂರೆನ್ಸ್ ಕಂಪನಿಗಳು ಮಂತ್ರಿಗಳೊಡನೆ ಜೀವವಿಮೆಯ ಉದ್ಯಮವನ್ನು ಮಾಡುವುದಕ್ಕೆ ಹಿಂತೆಗೆಯುವವು.

ಹೆಚ್ಚು ಕಡಿಮೆ ಸನ್ ೧೯೧೨ರಿಂದ ೧೯೩೦ರ ವರೆಗೆ, ಮಂತ್ರಿಮಂಡಲಗಳ ನಿರ್ಮಾಣದ ವಿಷಯದಲ್ಲಿ ಪ್ರಜಾಪಕ್ಷಗಳ ಮಾತಿಗೆ ಸ್ವಲ್ಪ ಮರ್ಯಾದೆ ಇದ್ದಿತು. ಆದರೆ ೧೯೩೧ರಲ್ಲಿ ಉದ್ಭವಿಸಿದ 'ಮಂಚೂರಿಯ ಘಟನೆ'ಯಿಂದ ಪ್ರಜಾಪಕ್ಷಗಳು ಅಧಿಕಾರವನ್ನು ಕಳೆದುಕೊಂಡು, ಸೈನ್ಯದವರು ಹಾಡುವ ರಾಗಕ್ಕೆ ತಾಳಹಾಕಿಕೊಂಡು ಹೋಗುತ್ತಲಿದ್ದಾರೆ. ಹಾಗೆ ಮಾಡದೆ ಇದ್ದರೆ ಅವರಿಗೆ ಬೇರೆ ಮಾರ್ಗವೆ ಇಲ್ಲ. ಇವರ ಅಧಿಕಾರವಾದರೋ ಸ್ವಲ್ಪ; ಅಂದ ಮೇಲೆ ಸೈನ್ಯದ ಮೇಲೆ ಇವರು ತಿರುಗಿ ಬೀಳಲು ಎಷ್ಟರಮಟ್ಟಿಗೆ ಸಾಧ್ಯ. ಇಂದಿಗೂ ಪ್ರಜಾಪ್ರತಿನಿಧಿಸಭೆಯ ಸದಸ್ಯರಲ್ಲಿ ಬಹುಭಾಗದವರು, ಸರಕಾರದವರು ಕೈಗೊಂಡಿರುವ ಅನೇಕ ವಿಷಯಗಳ ಮೇಲೆ ತಮ್ಮ ಅಸಮ್ಮತಿಯನ್ನು ತೋರಿಸಿರುತ್ತಾರೆ. ಆದರೆ ಅಸಮ್ಮತಿಯಿಂದೇನು ಫಲ? ಸರಕಾರವು ನಡೆಯಿಸುತ್ತಿರುವ ಕಾರ್ಯಗಳನ್ನು ಅಲ್ಲಗಳೆಯುವಷ್ಟು ಶಕ್ತಿಯನ್ನು ಅವರು ಹೊಂದಿಲ್ಲ. ಬಹಿರಂಗವಾಗಿ ಸರಕಾರದ ಮೇಲೆ ಟೀಕೆ ಮಾಡುವುದಕ್ಕೆ ಅವರಿಗೆ ಅಧಿಕಾರವಿಲ್ಲ. ಪ್ರಜಾವರ್ಗಕ್ಕೇ ಸೇರಿದ ಒಂದು ತಂಡವು, ಸರಕಾರವು ಕೈಗೊಳ್ಳುವ ಕಾರ್ಯಗಳಿಗೆ ತಮ್ಮ ಬೆಂಬಲವನ್ನು ಕೊಟ್ಟು, ಸರಕಾರದ ಧ್ಯೇಯ ಧೋರಣೆಗಳನ್ನು ಎದುರಿಸುವ ಬೇರೆ ಪಂಗಡಗಳವರಿಗೆ, ಹೆಚ್ಚಿನ ಚಿತ್ರಹಿಂಸೆಯನ್ನು ಕೊಡುತ್ತಲಿರುವುದು. ಅಂದಮೇಲೆ, ಪ್ರಜೆಗಳ ಒಂದು ತಂಡವು ಸರಕಾರದವರೊಡನೆ ಸಹಕರಿಸುತ್ತಿರುವುದು, ಮತ್ತೊಂದು

ತಂಡವು ಆ ಧ್ಯೇಯಗಳಿಗೆ ಸೈಯಿಕ್ಕಿದರೂ ಯಾವ ಕಾರ್ಯಗಳನ್ನೂ ಕೈ-ಕೊಳ್ಳಲು ಶಕ್ತಿಯಿಲ್ಲದೆ ಸುಮ್ಮನಿರುವುದು. ಇದೀಗ ಜಪಾನಿನ ಸ್ಥಿತಿ.

ಸನ್ ೧೯೩೧ರಲ್ಲಿ ಜಪಾನಿಯರ ಸೈನ್ಯವು. ಮಂತ್ರಿಮಂಡಲದ ಇಲ್ಲವೆ ಪ್ರಜಾಪ್ರತಿನಿಧಿ ಸಭೆಯ ಅನುಮತಿಯನ್ನು ಪಡೆಯದೆಯೆ ಮಂಚೂರಿಯ ದೇಶವನ್ನು ಆಕ್ರಮಿಸಿತು. ಸೈನ್ಯದ ಈ ರೀತಿಯ ಆಕ್ರಮ ಅನಾಯಕ ವೃತ್ತಿಯ ಬಗ್ಗೆ ಪ್ರಜಾಪ್ರತಿನಿಧಿಸಭೆಯಲ್ಲಿ ಆಕ್ಷೇಪಣೆಗಳು ಬರಲು, ಯುದ್ಧ ಮಂತ್ರಿಯು ಗರ್ಜಿಸಿ, ಸದಸ್ಯರ ಬಾಯಿಗಳನ್ನು ಮುಚ್ಚಿಸಿದನು. ಬಾಯಿ ಮುಚ್ಚಿಕೊಳ್ಳದೆ ಇನ್ನೇನು ಮಾಡಿಯಾರು ಪಾಪ, ಸದಸ್ಯರು! ಸದ್ಯದಲ್ಲಿ ನಡೆಯುತ್ತಿರುವ 'ಚೀನಾ-ಜಪಾನ್ ಘಟನೆ'ಯ ವಿಷಯವಾಗಿ ಅನೇಕ ಸದಸ್ಯರಿಗೆ, ಸರಕಾರದ ಕೃತಿಗಳ ಬಗ್ಗೆ ಅಸಮ್ಮತಿಯಿದ್ದರೂ, ಶಕ್ತಿಶೂನ್ಯರಾಗಿ, ಸರಕಾರವು ಆ ವಿಷಯವಾಗಿ ತರುವ ಎಲ್ಲಾ ಠರಾವುಗಳನ್ನು ಮಂಜೂರು ಮಾಡಲು ನೆರವಾಗಿರುವರು. ಅಂತರ್ಯದಲ್ಲಿ ಇಲ್ಲಿಯ ಸದಸ್ಯರಲ್ಲಿ ಭಿನ್ನ-ಭೇದಗಳೇನೇ ಇದ್ದರೂ "ತನ್ನ ದೇಶಕ್ಕೂ ಪರದೇಶಕ್ಕೂ" ಸಂಬಂಧ ಪಟ್ಟ ಯಾವ ವಿಷಯಗಳು ಬಂದರೂ ಎಲ್ಲರೂ ಒಟ್ಟಿಗೆ ಸಹಕರಿಸುವರು. 'ಪರದೇಶ'ದ ಹೆಸರೆತ್ತಿದರೆ ಸಾಕು, ಎಲ್ಲರೂ ಒಟ್ಟಿಗೆ ಸೇರಿ ಕೆಲಸಮಾಡುವರು. ಈ ಗುಟ್ಟನ್ನು ಸರಕಾರವು ಅನೇಕ ವೇಳೆ ದುರುಪಯೋಗಿಸಿಕೊಂಡಿದೆ. ಇಲ್ಲಿಯ ಪ್ರತಿಯೊಬ್ಬನೂ ದೇಶದ ಮರ್ಯಾದೆಯನ್ನು ಕಾಪಾಡುವುದರಲ್ಲಿ 'ಅಹಮಹಮಿಕೆ'ಯನ್ನು ವಹಿಸುತ್ತಾನೆ.

## ಮಂತ್ರಿಮಂಡಲಗಳು (Cabinets)

ಜಪಾನಿನ ಮಂತ್ರಿಮಂಡಲಗಳು ಚಕ್ರವರ್ತಿಗಳಿಂದ ನಿಯಮಿಸಲ್ಪಡುವವು. ಹಾಗೆ ನಿಯಮಿಸಲ್ಪಟ್ಟ ಮಂತ್ರಿಮಂಡಲಗಳು ಚಕ್ರವರ್ತಿಗಳಿಗೆ ಮಾತ್ರ ಜವಾಬ್ದಾರವಲ್ಲದೆ ಪ್ರಜಾಪ್ರತಿನಿಧಿ ಸಭೆಗಲ್ಲ. ಚಕ್ರವರ್ತಿಗಳು ಸ್ಥಯೋನ್‌ಜಿ ಎಂಬ ಹಿರಿಯ ರಾಜಕಾರಣಪಟು (Genro) ವಿನ ಸಲಹೆಯನ್ನು ಪಡೆದು ಮಂತ್ರಿಮಂಡಲವನ್ನು ನಿಯಮಿಸುವರು. ಅಂದಮೇಲೆ ಮಂತ್ರಿಮಂಡಲ ನಿರ್ಮಾಣದಲ್ಲಿ ಚಕ್ರವರ್ತಿಗಳ ಸ್ವಂತ ಅಭಿಪ್ರಾಯವೇನೂ ಇರುವು

ದಿಲ್ಲ. ಈ ಹಿರಿಯನು (Genro) ಕೂಡ, ದೇಶದ ಪರಿಸ್ಥಿತಿಯನ್ನು ಪರೀಕ್ಷಿಸಿಯೆ ಸಲಹೆಯನ್ನು ಕೊಡುವನು. ಸದ್ಯದಲ್ಲಿ, ಸೈನ್ಯದವರು ಮತ್ತು ರಾಜಕೀಯ ಪಕ್ಷಗಳು, ಈ ಹಿರಿಯ ರಾಜಕಾರಣಪಟುವಿನ ಅಧಿಕಾರವನ್ನು ನಿಷೇಧಿಸುತ್ತಾರೆ. ಅನೇಕ ವೇಳೆ ಆತನ ಕೊಲೆಯ ಬಗ್ಗೆ ಪ್ರಯತ್ನಗಳೂ ನಡೆದವು. ಆದರೆ ದೈವವಶದಿಂದ ತಪ್ಪಿಸಿಕೊಂಡು ಸಯೊನ್‌ಜಿ ಮಹಾರಾಯನು ಇನ್ನೂ ಜೀವದಿಂದಿರುವನು. ಇವನ ಕಡೆಯ ಸಲಹೆಯೆಂದರೆ, 'ಚಕ್ರವರ್ತಿಗಳು ಈತನ ಮರಣದ ನಂತರ ಇತರ ಯಾವ ರಾಜಕಾರಣ ನಿಪುಣನನ್ನೂ ಸಲಹೆಗಾರನಾಗಿ ನಿಯಮಿಸಿಕೊಳ್ಳಕೂಡದೆ 'ಂದು.

ಸದ್ಯದ ಮಂತ್ರಿಮಂಡಳವು ೧೩ ಮಂತ್ರಿಗಳನ್ನೊಳಗೊಂಡಿದೆ:—

| | | | |
|---|---|---|---|
| ಮುಖ್ಯಮಂತ್ರಿ | .. | .. | ಪ್ರಿನ್ಸ್ ಕೋನೋಹಿ |
| ಪರದೇಶಾಂಗದ ಮಂತ್ರಿ | .. | .. | ಸದ್ಯಕ್ಕೆ ಇವರೇ |
| ಒಳದೇಶಾಂಗದ ಮಂತ್ರಿ | .. | .. | ಅಡ್‌ಮಿರಲ್ ಸೈಮಾತ್ಸು |
| ಹಣಕಾಸಿನ ಮಂತ್ರಿ | .. | .. | ಮ. ರಾ. ಇಕೆಡ್ |
| ಭೂಸೈನ್ಯದ ಮಂತ್ರಿ | .. | .. | ಜನರಲ್ ಇತಗಾಕಿ |
| ಜಲಸೈನ್ಯದ ಮಂತ್ರಿ | .. | .. | ಅಡ್‌ಮಿರಲ್ ಯೋನೇಯಿ |
| ನ್ಯಾಯಾಂಗದ ಮಂತ್ರಿ | .. | .. | ಮ. ರಾ. ಸಯಿನೋ |
| ವಿದ್ಯಾ ಇಲಾಖೆಯ ಮಂತ್ರಿ | | .. | ಜನರಲ್ ಅರಾಕಿ |
| ವ್ಯವಸಾಯ ಇಲಾಖೆಯ ಮಂತ್ರಿ | | .. | ಕೊರಂಟ ಅರಿಮ |
| ಕೈಗಾರಿಕೆಯ ಮತ್ತು ವಾಣಿಜ್ಯದ ಮಂತ್ರಿ | | | ಮ. ರಾ. ಇಕೆಡ |
| ಸುದ್ದಿಮಾರ್ಗಗಳ ಮಂತ್ರಿ | | .. | ಮ. ರಾ. ನಹಾಯಿ |
| ರೈಲ್ವೆ ಇಲಾಖೆಯ ಮಂತ್ರಿ | | .. | ಮ. ರಾ. ನಕಜಿಮ |
| ವಸಾಹತುಗಳ ಮಂತ್ರಿ | .. | .. | ಮ. ರಾ. ಹೊಶಾನಿ |

ಮಂತ್ರಿಮಂಡಲದ ಜೀವಮಾನವು ಸ್ವಲ್ಪಮಟ್ಟಿಗೆ ಪ್ರಜಾಪ್ರತಿನಿಧಿ ಸದಸ್ಯರನ್ನೂ ಅವಲಂಬಿಸಿದೆ. ಸದಸ್ಯರು ಹೆಚ್ಚಿನ ಅಧಿಕಾರವನ್ನು ಪಡೆಯದೆ ಇದ್ದರೂ ಮಂತ್ರಿಮಂಡಲಗಳಿಗೆ ಉಪದ್ರವವನ್ನು ಕೊಡುವ ಅಧಿಕಾರವನ್ನು ಪಡೆದಿರುವರು. ಆದ್ದರಿಂದಲೆ ಇಂದಿನ ವರೆಗೆ ಸದಸ್ಯರ ಬೆಂಬಲದಿಂದ,

ನಾಲ್ಕಾರು ವರ್ಷಗಳ ವರೆಗೆ ಜೀವ ತಾಳಿ ಕೆಲಸ ಮಾಡಿದ ಮಂತ್ರಿಮಂಡಲ ಗಳೂ ಇವೆ; ಅದೇ ಬೆಂಬಲ ಪಡೆಯದೆ ಪೀಡೆಗೆ ಒಳಗಾಗಿ, ಮೂರು ನಾಲ್ಕು ತಿಂಗಳ ಒಳಗಾಗಿ ನಶಿಸಿ ಹೋದ ಮಂತ್ರಿಮಂಡಲಗಳೂ ಇವೆ. ಜಪಾನಿನ ರಾಜಕೀಯ ಚರಿತ್ರೆಯಲ್ಲಿ, ನಿವೃತ್ತಿ ಹೊಂದಿದ ಭೂ ಮತ್ತು ಜಲಸೈನ್ಯದ ಅಧಿಕಾರಿಗಳು ಅನೇಕ ಬಾರಿ ಮುಖ್ಯಮಂತ್ರಿ ಪದವಿಯನ್ನು ಹೊಂದಿ, ಮಂತ್ರಿಮಂಡಲಗಳನ್ನು ನಡೆಯಿಸಿರುವುದನ್ನು ಕಾಣಬಹುದು. ಪ್ರತಿ ಮಂತ್ರಿಮಂಡಲಕ್ಕೂ, ಭೂ ಮತ್ತು ಜಲಸೈನ್ಯದ ಇಲಾಖೆಗಳು, ತಮ್ಮ ತಮ್ಮ ಅಧಿಕಾರಿಗಳಲ್ಲಿಯೇ ಯೋಗ್ಯರಾದವರನ್ನು, ಭೂ ಮತ್ತು ಜಲಸೈನ್ಯದ ಇಲಾಖೆಗಳ ಮಂತ್ರಿತ್ವವನ್ನು ವಹಿಸುವುದಕ್ಕೆ ಕಳುಹಿಸುವರು. ಮಂತ್ರಿ ಮಂಡಲವನ್ನು ನಿರ್ಮಿಸುವ ಮುಖ್ಯಮಂತ್ರಿಯು ಸೈನ್ಯದವರ ಇಷ್ಟದಂತೆ ನಡೆಯದೆ ಇದ್ದರೆ, ಆತನ ಮಂತ್ರಿಮಂಡಲ ರಚನೆಯ ಕಾರ್ಯವೇ ಕಟ್ಟಾಗುವುದು. ಕಳೆದ ವರ್ಷ, **ಜನರಲ್ ಹುಗಾರಿ** ಯವರು, ಮಂತ್ರಿಮಂಡಲ ರಚನೆಯ ಬಗ್ಗೆ ಚಕ್ರವರ್ತಿಗಳಿಂದ ಆಜ್ಞಾಪತ್ರರಾದರೂ, ಯುದ್ಧಮಂತ್ರಿಯ ಸಹಕಾರವನ್ನು ಪಡೆಯದಿದ್ದುದರಿಂದ ಇಡಿ ಮಂತ್ರಿಮಂಡಲವನ್ನು ರಚಿಸುವುದೇ ಅಸಾಧ್ಯವಾಯಿತು. ಇಡಿ ಜಪಾನಿನ ಚರಿತ್ರೆಯಲ್ಲಿ, ಭೂ ಮತ್ತು ಜಲಸೈನ್ಯ ಇಲಾಖೆಯ ಮಂತ್ರಿಪದವು ಸಾರ್ವಜನಿಕರಿಂದ ನಡೆಸಲ್ಪಟ್ಟ ವಿಷಯವೆಂದು ಕಾಣಬರುವುದಿಲ್ಲ. ಸದ್ಯದ ಮಂತ್ರಿಮಂಡಲಗಳು ಸೈನ್ಯದ ಇಲಾಖೆಯು ಹೇಳಿದಂತೆ ಕೇಳಿಕೊಂಡು ಹೋದರೆ ಮಾತ್ರ ಸ್ವಲ್ಪಕಾಲ ಜೀವಿಸಲು ಆಸ್ಪದವಿದೆ; ಆದಿಲ್ಲದೆ ಇದ್ದರೆ, ಸಾವು ಮರುಕ್ಷಣದಲ್ಲಿಯೇ ಸಿದ್ಧ! ಒಳಅರ್ಥದಲ್ಲಿ ಇಲ್ಲಿಯ ಸೈನ್ಯ ಇಲಾಖೆಯ ಮಂತ್ರಿಯೇ ಮುಖ್ಯ ಮಂತ್ರಿಯಲ್ಲದೆ ಮತ್ತೆ ಬೇರೆ ಇಲ್ಲ. ಯಾವ ಮುಖ್ಯಮಂತ್ರಿಯ ಜೀವನ ಕಾಲವೇ ಆಗಲಿ, ಸೈನ್ಯ ಇಲಾಖೆಯ ಸಹಾಯವನ್ನೇ ಅವಲಂಬಿಸಿರುವುದು.

## ಚಕ್ರವರ್ತಿಗಳ ಆಡಳಿತ

ಅನೇಕ ಪರದೇಶದ ಜನರು "ಜಪಾನಿನ ಚಕ್ರವರ್ತಿಗಳು ನಿರಂಕುಶ ರಾಗಿ ರಾಜ್ಯವಾಳುತ್ತಿದ್ದಾರೆ" ಎಂಬ ತಪ್ಪು ಭಾವನೆಯನ್ನು ಮಾಡಿಕೊಂಡಿ ದ್ದಾರೆ. ಇಲ್ಲಿಯ ಚಕ್ರವರ್ತಿಗಳು ರಾಜ್ಯಾಡಳಿತದಲ್ಲಿ ವಿಶೇಷ ಅಧಿಕಾರವನ್ನು

ಪಡೆದಿದ್ದರೂ ನಿರಂಕುಶರಲ್ಲ. ಪೂರ್ವಕಾಲದಿಂದಲೂ, ಇಲ್ಲಿಯ ಅರಸರು ಸ್ವಂತವಾಗಿ ಅಧಿಕಾರ ಚಲಾವಣೆಗೆ ಕೈಹಾಕಿಲ್ಲ. ರಾಜ್ಯಶಾಸನ (Constitution) ದಂತೆಯೂ ಮತ್ತು ವಾಡಿಕೆ (Convention) ಯಂತೆಯೂ ಇಲ್ಲಿಯ ಚಕ್ರವರ್ತಿಯು ದೈವಪುರುಷ, ರಾಜ್ಯದೊಡೆಯ, ನ್ಯಾಯಪರಿಪಾಲಕ, ಜನಾಂಗದ ಒಗ್ಗಟ್ಟಿನ ಚಿಹ್ನೆ; ಹೆಚ್ಚೇನು? ಅವನೇ ಸಕಲಸರ್ವಸ್ವ; ಅವನ ಮುಂದೆ ಮತ್ತೊಬ್ಬರು ಇಲ್ಲ. (According to the constitution he is sacred and inviolable. He is to the Japanese mind the Supreme Being in the Cosmos of Japan, as God is in the universe to the pantheistic philosopher. He is the sole owner of the Empire, the author of law, justice, privilege and honour and the symbol of the unity of the Japanes nation.)

ಇಷ್ಟು ಅಧಿಕಾರಗಳನ್ನು ಚಕ್ರವರ್ತಿಗಳು ಪಡೆದಿದ್ದರೂ ಮಂತ್ರಿಗಳ ಸಲಹೆಯಂತೆ ರಾಜ್ಯಭಾರ ಮಾಡುವರಲ್ಲದೆ, ಅನ್ಯಥಾ ಇಲ್ಲ! ಡಾ. **ಕ್ಯೊಗಲಿ** ಯವರ ಅಭಿಮತದಂತೆ ಚಕ್ರವರ್ತಿಗಳು ಯಾವ ವಿಷಯವನ್ನೂ ತಾವೊಬ್ಬರೆ ತೀರ್ಮಾನಿಸದೆ, ರಾಜಶಾಸನ (Constitution) ಕ್ಕೆ ಸಂಬಂಧಪಟ್ಟ ಅಧಿಕಾರಿ ಗಳೊಡನೆ ಯೋಚಿಸಿ ಅವರ ಸಲಹೆಗನುಸಾರವಾಗಿ ತೀರ್ಪನ್ನು ಕೊಡುವರು. ಚಕ್ರವರ್ತಿಗಳು ನೇರವಾಗಿ ರಾಜ್ಯಭಾರವನ್ನು ಮಾಡದಿದ್ದರೂ ತಮ್ಮ ದೇವಾಂಶಶಕ್ತಿಯಿಂದ ಜನರನ್ನೆಲ್ಲ ತಮ್ಮೆಡೆಗೆ ಆಕರ್ಷಿಸಿಕೊಂಡಿರುವರು. ಇಲ್ಲಿಯ ಚಕ್ರವರ್ತಿಗಳು ರಾಜಕಾರಣದಾಟದ ಬೊಂಬೆಯಲ್ಲ, ಅವರೊಬ್ಬ ಜೀವಿಸಿಕೊಂಡಿರುವ ದೈವ. ಆದ್ದರಿಂದಲೇ ಲಕ್ಷಾಂತರ ಜನರು ಇವರಿಗಾಗಿ ಪ್ರತಿಕ್ಷಣದಲ್ಲಿಯೂ ಪ್ರಾಣಕೊಡಲು ಸಿದ್ಧರಾಗಿರುವರು. ಇಲ್ಲಿಯ ಚಕ್ರ ವರ್ತಿಗಳು ವಾಡಿಕೆಯಲ್ಲಿ, ಸರಳಜೀವನವನ್ನು ನಡೆಸಿಕೊಂಡು ಬಂದಿರುವರು. ವರ್ಷಕ್ಕೆ ರಾಜ್ಯದ **ಇನ್ನೂರಐವತ್ತು ಕೋಟಿ** ಎನ್‌ಗಳ ಹುಟ್ಟುವಳಿಯಲ್ಲಿ ಕೇವಲ ನಲ್ವತ್ತೈದು ಲಕ್ಷ ಎನ್‌ಗಳನ್ನು ಮಾತ್ರ ತಮ್ಮ ಸ್ವಂತದ ಉಪ ಯೋಗಕ್ಕೆ ತೆಗೆದುಕೊಳ್ಳುತ್ತಾರೆ. ಇಲ್ಲಿಯ ಚಕ್ರವರ್ತಿಗಳು ಪ್ರಜೆಗಳನ್ನು ಹಿಂಸೆಗೊಳಿಸಿ ತಾವು ಸುಖಲೋಲುಪರಾಗಿರುವ ವ್ಯಕ್ತಿಗಳಲ್ಲ. ಸುದೈವ ದಿಂದ ದೊರೆತ ಇಂತಹ ಚಕ್ರವರ್ತಿಗಳ ನೇತೃತ್ವದಲ್ಲಿ “ಕೀಳಾಗಿದ್ದ ಜಪಾನು

ಮುಂದುವರಿದ ರಾಜ್ಯಗಳ ಶ್ರೇಣಿಯಲ್ಲಿ ಸ್ಥಾನವನ್ನು ಪಡೆದದ್ದು "ಯಾವ ಆಶ್ಚರ್ಯ?

ಸದ್ಯ ಆಳುತ್ತಿರುವ ಚಕ್ರವರ್ತಿಗಳ ಹೆಸರು **ಹಿರೊ ಹಿತೊ** ಎಂದು. ಅವರ ವಯಸ್ಸು ಮೂವತ್ತೆಂಟು. ಇವರ ಆಳಿಕೆಯು "ಷೋವಾ" ಎಂಬ ಶಕದ ಹೆಸರಿನಲ್ಲಿ ಪ್ರಸಿದ್ಧಿಯನ್ನು ಹೊಂದಿರುವುದು. ಚಕ್ರವರ್ತಿನಿಯವರ ಹೆಸರು **ನಗರಿಕೊ** ಎಂದು. ಅವರ ವಯಸ್ಸು ಮೂವತ್ತೈದು. ಚಕ್ರ ವರ್ತಿಗಳಿಗೆ ಎರಡು ಗಂಡುಮಕ್ಕಳು ಮತ್ತು ಹೆಣ್ಣುಮಕ್ಕಳು ಇರುವವು. ಮುಖ್ಯವಾಗಿ ಮೇಲ್ಕಂಡ ವಿವರಣೆಯಲ್ಲಿ ಇಲ್ಲಿಯ ಚಕ್ರವರ್ತಿಯು ನಿರಂಕು ಶಾಧಿಕಾರಿಯಲ್ಲವೆಂಬ ವಿಷಯುವು ವಾಚಕರಿಗೆ ಮನದಟ್ಟಾಗಿರಲು ಸಾಕು.

## ಭೂ-ಜಲ ಸೈನ್ಯ ಇಲಾಖೆಗಳ ಆಡಳಿತ

ಜಪಾನ್ ದೇಶವನ್ನು ಪ್ರಜಾಪ್ರತಿನಿಧಿಸಭೆಯಾಗಲಿ, ನಿರಂಕುಶ ಚಕ್ರ ವರ್ತಿಗಳ ಅಧಿಕಾರವಾಗಲಿ ಆಳುತ್ತಿಲ್ಲವೆಂದ ಮೇಲೆ ಮತ್ತೆ ಯಾರು ಅದನ್ನು ಆಳುತ್ತಿರುವರು? ಒಳಅರ್ಥದಲ್ಲಿ, ಭೂ-ಜಲ ಸೈನ್ಯಗಳೇ ಜಪಾನ್ ದೇಶವನ್ನು ಆಳುತ್ತಿವೆಯಲ್ಲದೆ ಮತ್ತೆ ಬೇರೆ ಇಲ್ಲ.

ರಾಜ್ಯಶಾಸನ (Constitution) ದ ೧೧, ೧೨ ಮತ್ತು ೧೩ನೆಯ ವಿಧಿಗಳ ಮೇರೆಗೆ ಭೂ ಮತ್ತು ಜಲ ಸೈನ್ಯ ಇಲಾಖೆಗಳ ಅಧಿಕಾರವು ಚಕ್ರವರ್ತಿ ಗಳಿಗೆ ಸಂಬಂಧಪಟ್ಟಿದ್ದು. ಯುದ್ಧವನ್ನು ಪ್ರಾರಂಭಿಸುವುದು, ಶಾಂತಿ ಪ್ರಸ್ಥಾಪನೆ, ಪರದೇಶಗಳೊಡನೆ ಕೌಲನ್ನು ಮಾಡಿಕೊಳ್ಳುವುದು—ಇವೆಲ್ಲ ಚಕ್ರವರ್ತಿಗಳ ಅಧಿಕಾರಕ್ಕೆ ಸಂಬಂಧಪಟ್ಟವುಗಳು. ದೇಶದ ರಕ್ಷಣೆಯಲ್ಲಿ ತೊಡಗಿರುವ ಯಾವ ಅಧಿಕಾರಿಯೂ ರಾಜಕೀಯ ವಿಷಯುಗಳಲ್ಲಿ ಭಾಗ ವಹಿಸಕೂಡದೆಂಬ ಕಟ್ಟಳೆಯು ಶಾಸನದಲ್ಲಿದೆ. ರಾಜ್ಯಶಾಸನವು ಅಮಲಿನಲ್ಲಿ ಬಂದ ೧೮೮೯ರಿಂದ ೧೯೦೫ರ ವರೆಗೆ ಸೈನ್ಯದ ಅಧಿಕಾರಿಗಳು ರಾಜಕೀಯ ವಿಷಯುಗಳಲ್ಲಿ ಪ್ರವೇಶಿಸದೆ, ತಮ್ಮ ಕಾರ್ಯಗಳಿಗೆ ಮಾತ್ರ ಗಮನ ಕೊಟ್ಟುಕೊಂಡು ಹೋಗುತ್ತಿದ್ದರು. ಆದರೆ ಮಹಾಯುದ್ಧದ ನಂತರ ಸೇನಾಧಿಕಾರಿಗಳಿಗೆ ರಾಜಕೀಯ ವಿಷಯುಗಳಲ್ಲಿ ಲಾಲಸೆ ಹೆಚ್ಚಿ,

ಅವರು ಹೆಚ್ಚಿನ ಅಧಿಕಾರಕ್ಕಾಗಿ ಆಸೆಪಡಲಾರಂಭಿಸಿದರು. ಬಿಳಿಯ ಜನರು ಸಾವಿರಾರು ಮೈಲಿಗಳ ದೂರದಿಂದ ಬಂದು ನಮ್ಮ ನೆರೆಯ ಪ್ರಾಂತದಲ್ಲಿ ಆರ್ಥಿಕಶೋಷಣೆಯನ್ನು ಮಾಡುತ್ತಿರುವುದು, ಇವರ ಬಾಯಿಯಲ್ಲಿ ನೀರು ಕರೆಯಿಸಿತು. ಎಷ್ಟೋ ವರ್ಷಗಳಿಂದ ಬೆಳೆಯುತ್ತ ಬಂದು ಬಲಶಾಲಿ ಯಾಗಿದ್ದ ಸೈನ್ಯದ ಸಹಾಯದಿಂದ, ಅದೇ ಬಗೆಯ ಆರ್ಥಿಕ ಸುಲಿಗೆಯನ್ನು ತಾವೂ ಏಕೆ ಮಾಡಬಾರದೆಂಬ ಆಸೆಯು ಸೈನ್ಯದ ಅಧಿಕಾರಿಗಳಲ್ಲಿ ಅಂಕುರಿ ಸಿತು. ಚೀನಾ ದೇಶದಲ್ಲಿ ನಾಲ್ವರು ಬಿಳಿ ಜನಾಂಗದವರು ಈ ಸೂರೆಯ ಕಾರ್ಯದಲ್ಲಿ ತೊಡಗಿರುವುದರಿಂದ ಅಲ್ಲಿ ತಾವು ಕೈಹಾಕುವುದರಿಂದ ಅವರೆಲ್ಲಿ ಕುಪಿತರಾಗುವರೋ ಎಂಬ ಸಂಶಯವು ಕೆಲವು ಕಾಲ ಇವರನ್ನು ಬಾಧಿಸಿ ದ್ದಿತು. ಕಡೆಗೆ, ಯಾವ ರೀತಿಯಿಂದಲಾದರೂ ಬಿಳಿಯರನ್ನು ಓಡಿಸಿ ಆ ಸೂರೆಯನ್ನು ತಾವು ಮಾಡಬೇಕೆಂದು ನಿರ್ಣಯಿಸಿ, ಸೈನ್ಯದ ಅಧಿಕಾರಿಗಳು ಕಾರ್ಯಸೂತ್ರಗಳನ್ನು ಕೈಕೊಳ್ಳಲು ಪ್ರಾರಂಭಿಸಿದರು. ಇದರ ಪರಿಣಾಮ ವಾಗಿಯೇ ಸನ್ ೧೯೩೧ರಲ್ಲಿ ಪ್ರಜಾಪ್ರತಿನಿಧಿಸಭೆಯ ಮತ್ತು ಮಂತ್ರಿ ಮಂಡಲದ ಸಲಹೆಗಳನ್ನು ಪಡೆಯದೆಯೇ ಸೈನ್ಯದ ಒಂದು ಭಾಗವು ಮಂಚೂರಿಯ ದೇಶವನ್ನು ಆಕ್ರಮಿಸಿತು. ಚೀನೀ ನಾಯಕರು ಯುದ್ಧ ಮಾಡುವುದಕ್ಕೆ ಬದಲಾಗಿ, ತಕ್ಕಷ್ಟು ಲಂಚವನ್ನು ಪಡೆದು, ಜಪಾನಿಯರಿಗೆ ರಹದಾರಿಯನ್ನು ಬಿಟ್ಟುಕೊಟ್ಟರು. ಹೀಗೆ ಕೆಲವು ತಿಂಗಳ ಕಾಲದಲ್ಲಿಯೇ ಇಡೀ ಮಂಚೂರಿಯ ದೇಶವು ಜಪಾನ್ ಸೈನ್ಯದ ವಶವಾಯಿತು. ಇಂತಹ ಕಾರ್ಯದಿಂದ ಪರರಾಜ್ಯಗಳು ಜಪಾನಿನ ಮೇಲೆ ಎಲ್ಲಿ ಕೋಪಮಾಡಿಕೊಳ್ಳು ವವೋ ಎಂಬ ಭಯದಿಂದ ಮಂತ್ರಿಮಂಡಲದಲ್ಲಿಯ ಕೆಲವು ಮಂತ್ರಿಗಳು ಸೈನ್ಯದವರು ಕೈಕೊಂಡ ಕಾರ್ಯವನ್ನು ಖಂಡಿಸಲು, ಯುದ್ಧಮಂತ್ರಿಯು, ಪೂರ್ವದೇಶದಲ್ಲಿ ತಮ್ಮ ಸೈನ್ಯದ ಶಕ್ತಿಯು ಭದ್ರವಾಗಿರುವುದೆಂತಲೂ, ಯಾವ ರಾಷ್ಟ್ರವೇ ತಮ್ಮ ಮೇಲೆ ತಿರುಗಿ ಬಿದ್ದರೂ ಆದರೊಡನೆ ಯುದ್ಧ ಮಾಡಲು ತಾವು ಸಿದ್ಧರಿರುವುದರಿಂದ ಮಂಚೂರಿಯದಲ್ಲಿ ತಾವು ಮಾಡಿದು ದೆಲ್ಲ ಸರಿಯೆಂತಲೂ ಭುಜ ತಟ್ಟಿಕೊಂಡನು. ಪರಕೀಯರು ಏರಿ ಬಂದರೆ ತಮ್ಮ ಸೈನ್ಯದ ಜೊತೆಗೆ ಇಡೀ ದೇಶಕ್ಕೆ ದೇಶವೇ ಸಹಾಯ ಮಾಡಲು ಮುಂದೆ ಬರುವುದಾಗಿ ಸರಕಾರಕ್ಕೆ ತಿಳಿಸಿದನು. ಇದರಿಂದ ಸರಕಾರವು

ಕೂಡ, ಸೈನ್ಯದವರು ಕೈಕೊಂಡ ಕಾರ್ಯಕ್ರಮವೇ ಸರಿಯೆಂದು ಪ್ರಪಂಚದ ಮುಂದೆ ಸಾರಿತು.

ಆರ್ಥಿಕ ಅನುಕೂಲಕ್ಕಾಗಿಯೂ ರಷ್ಯದವರನ್ನು ಹಿಂದಟ್ಟುವುದಕ್ಕಾಗಿಯೂ ಜಪಾನೀ ಸೈನ್ಯದವರು ಮಂಚೂರಿಯವನ್ನು ಸನ್ ೧೯೩೩ರಲ್ಲಿ ಆಶ್ರಿತ ಚಕ್ರಾಧಿಪತ್ಯವನ್ನಾಗಿ ಏರ್ಪಡಿಸಿದರು. ಅಮೇರಿಕ ದೇಶದವರು, ಇದರಿಂದ ತಮ್ಮ ಆರ್ಥಿಕ ವ್ಯವಹಾರಗಳು ಚೀನಾ ದೇಶದಲ್ಲಿ ನಾಶವಾಗುವುದರಿಂದ, ಇವರ ಮೇಲೆ ತಕ್ಕ ಕಾರ್ಯಕ್ರಮವನ್ನು ಜರುಗಿಸುವುದಕ್ಕಾಗಿ ಇಂಗ್ಲಿಷರ ಸಹಾಯವನ್ನು ಕೋರಿದರು. ಚೀನದಲ್ಲಿಯ ಇಂಗ್ಲಿಷರ ಆರ್ಥಿಕ ಕ್ಷೇತ್ರಕ್ಕಿಂತ ಅತಿ ದೂರದಲ್ಲಿರುವ ಮಂಚೂರಿಯವನ್ನು ಜಪಾನರು ಆಕ್ರಮಿಸಿರುವುದರಿಂದ ತಮ್ಮ ಹಿತಕ್ಕೆ ಯಾವ ನಷ್ಟವೂ ಉಂಟಾಗುವುದಿಲ್ಲವೆಂದು ಊಹಿಸಿ ಇಂಗ್ಲಿಷರು ಸಹಕಾರವನ್ನು ನಿರಾಕರಿಸಿದರು. ಅಮೆರಿಕವು ಒಬ್ಬೊಂಟಿಗವಾಗಿ ಏನನ್ನೂ ಮಾಡಲು ಸಾಧ್ಯವಿಲ್ಲದೆ ಬರಿಯ ಆರ್ಭಟಿಯಿಂದಲೇ ಸುಮ್ಮನಿರಬೇಕಾಯಿತು. ಜಪಾನು ಕೂಡ, ತನ್ನ ಮೇಲೆ ಏರಿ ಬಂದವರನ್ನು, ತನ್ನ ಭೂ-ಜಲ-ಸೈನ್ಯಗಳ ಸಹಾಯದಿಂದ, ಬೆನ್ನುಮೂಳೆ ಮುರಿಯುವಂತೆ ನದೆಬಡಿಯುವೆವೆಂದು ಆರ್ಭಟಿಸಿತು. ಕಳೆದ ವರ್ಷ ಗ್ರೇಟ ಬ್ರಿಟನ್ನು ಜಪಾನಿಯರ ಮೇಲೆ ಒಂದು ಬಗೆಯ ಪ್ರತಿಕಾರಕ್ರಮವನ್ನು ಜರುಗಿಸುವ ಕುರಿತು ಅಮೆರಿಕದ ಸಹಾಯವನ್ನು ಕೋರಿತು; ಅಮೆರಿಕವು ಹಿಂದೆ ತನಗೆ ಇಂಗ್ಲಿಷರಿಂದ ದೊರೆತ ಮರ್ಯಾದೆಯನ್ನು ಜ್ಞಾಪಿಸಿಕೊಂಡು ಸಹಕಾರವನ್ನು ನಿರಾಕರಿಸಿತು. ಸನ್ ೧೯೩೩ರಲ್ಲಿ, ಜಗತ್ತಿನ ಪ್ರಮುಖ ರಾಷ್ಟ್ರಗಳು ಮಂಚೂರಿಯದಲ್ಲಿಯ ಜಪಾನಿನ ಆಧಿಪತ್ಯಕ್ಕೆ ಮನ್ನಣೆಯನ್ನು ಕೊಡದಿದ್ದುದಕ್ಕೆ, ಜಪಾನು ರಾಷ್ಟ್ರಸಂಘ (League of nations) ಕ್ಕೆ ಶರಣು ಹೊಡೆಯಿತು. ಈ ರೀತಿ ರಾಷ್ಟ್ರಸಂಘಕ್ಕೆ ಬಹಿಷ್ಕಾರ ಹಾಕಿದ ರಾಷ್ಟ್ರಗಳಲ್ಲಿ ಜಪಾನು ಮೊದಲನೆಯದು. ಇತರರ ಶಕ್ತಿಯೊಂದಿಗೆ ತನ್ನ ಶಕ್ತಿಯನ್ನು ತೂಗಿ ನೋಡಿ, ಉಳಿದವರು ಹಿಂದೆ ಮುಂದೆ ನೋಡುವ ವಿಷಯದಲ್ಲಿ ಜಪಾನು ನಿಃಸೀಮವಾದ ಧೈರ್ಯವನ್ನು ಪ್ರದರ್ಶಿಸಿತು. ಬಿಳಿಯ ಜನಾಂಗಗಳಾದರೋ ತತ್ಪ-ಗಿತ್ಪಗಳನ್ನು ಮೂಟೆ ಕಟ್ಟಿಟ್ಟು,

ಯುದ್ಧದ ಹವ್ಯಾಸವನ್ನು ಬಿಟ್ಟುಕೊಟ್ಟು, ಜಪಾನಿಗೆ ಚೀನಾಪ್ರವೇಶಕ್ಕೆ ದಾರಿಮಾಡಿಕೊಟ್ಟವು.

ಸನ್ ೧೯೩೫ರಲ್ಲಿ ಮುಸೊಲಿನಿಯು ಇಥೋಪಿಯದಲ್ಲಿ ನುಗ್ಗಿದಾಗ ಬಿಳಿಯ ಜನಾಂಗಗಳು ತಪಸ್ಸು ಮಾಡುತ್ತಿದ್ದ ವಿಷಯವನ್ನು ಕಂಡು, ಜಪಾನು, ಉತ್ತರಚೀನದಲ್ಲಿ ಇತರ ದೇಶಗಳಿಗಿಂತ ತನಗೆ ಹೆಚ್ಚಿನ ಆರ್ಥಿಕ ಸೌಕರ್ಯಗಳು ದೊರೆಯಬೇಕೆಂದು ಚೀನಾದೇಶಕ್ಕೆ ತಿಳಿಸಿತು. ಆದರೆ ಬಿಳಿಯ ಜನಾಂಗಗಳು ಯುದ್ಧವಾದಲ್ಲಿ ತನಗೆ ಸಹಾಯ ಮಾಡುವವೆಂದು ನಂಬಿಕೊಂಡು, ಚೀನಿಯರು ಜಪಾನಿಗೆ ಯುದ್ಧದ ಆಹ್ವಾನವನ್ನು ಕೊಟ್ಟರು. ಆದರೆ ಜಪಾನನ್ನು ಎದುರುಹಾಕಿಕೊಳ್ಳಲು ಇಷ್ಟಪಡದ ರಾಷ್ಟ್ರಗಳು ವಾಕ್ಕಾಯ ಮನಸ್ಸುಗಳಿಂದ ಚೀನಿಯರಿಗೆ ಬೆಂಬಲವಾಗಿ ನಿಲ್ಲುವವೆ?

ಜಪಾನ್ ಸೈನ್ಯದ ಗುರಿಗಳು ಎರಡುಬಗೆಯಾಗಿದ್ದವು: (೧) ತನ್ನ ಸೈನ್ಯದ ದೊಡ್ಡ ಭಾಗವೊಂದನ್ನು ಮಂಚೂರಿಯದಲ್ಲಿರಿಸಿ, ಅದರ ಬಲದಿಂದ ರಷ್ಯದವರು ತಮ್ಮ ದೇಶದ ತಂಟೆಗೆ ಬರದಂತೆ ನೋಡಿಕೊಳ್ಳುವುದು; ಒಂದೇ ಮೂಲ ಜನಾಂಗಕ್ಕೆ ಸೇರಿದ ಚೀನಿಯರಿಂದ ಮೊದಲು ತಮಗೆ ಆರ್ಥಿಕ ಸೌಕರ್ಯಗಳನ್ನು ಪಡೆಯುವುದು, ಇದಕ್ಕಾಗಿ ಎಂತಹ ಬೇಕಾದಂತಹ ತ್ಯಾಗವನ್ನೂ ಮಾಡುವುದು. ಎರಡನೆಯ ಉದ್ದೇಶದ ಅರ್ಥ, ಬಿಳಿಯ ಜನಾಂಗಗಳನ್ನು ಏಶಿಯಖಂಡದಿಂದ ಓಡಿಸಿ, ಅವರು ಆಕ್ರಮಿಸಿದ ರಾಜ್ಯಗಳನ್ನೂ ಪ್ರಜೆಗಳನ್ನೂ ತಾನು ಆಕ್ರಮಿಸುವುದೆಂದಿರದಿದ್ದರೂ, ಅವುಗಳ ವಿಶೇಷ ಆರ್ಥಿಕ ಸವಲತ್ತುಗಳಲ್ಲಿ ತಾನು ಅಗ್ರತಾಂಬೂಲವನ್ನು ಪಡೆಯುವುದಾಗಿತ್ತು. ಈ ತನ್ನ ಕೋರಿಕೆಗಳನ್ನು ನೆರವೇರಿಸುವದಕ್ಕಾಗಿ, ತನ್ನ ದೇಶದ ರಾಜಕೀಯ ವಿದ್ಯಮಾನಗಳ ಜವಾಬ್ದಾರಿಯನ್ನು ಜಪಾನ್ ಸೈನ್ಯವು ತಾನೇ ವಹಿಸುತ್ತಲಿದೆ.

ಒಟ್ಟಿನಲ್ಲಿ ಜಪಾನಿನ ರಾಜ್ಯದಾಡಳಿತವು ಸೈನ್ಯದವರಿಂದಲೆ ಸಾಗಿಸಲ್ಪಟ್ಟಿದೆಯೆಂದು ಹೇಳಬಹುದು. ಇತ್ತೀಚಿಗೆ ತಮ್ಮ ಕಾರ್ಯಗಳಿಗೆ ಜನರ ಬೆಂಬಲವನ್ನು ಪಡೆಯಲು ಸೈನ್ಯದವರು ತಕ್ಕ ಪ್ರಚಾರ ಕಾರ್ಯವನ್ನು ನಡೆಸಿ, ಅದನ್ನು ಗಳಿಸಿಕೊಂಡಿರುವರು. ಸೈನ್ಯದವರ ಇಷ್ಟದ ಮೇರೆಗೆ

ಮಂತ್ರಿಮಂಡಲದಲ್ಲಿಯು ಹೆಚ್ಚಿನ ಅಧಿಕಾರಸ್ಥಾನಗಳು ಅವರ ವಶಕ್ಕೇ ಹೋಗುತ್ತಲಿವೆ. ಸದ್ಯದ ವಿದ್ಯಾ ಇಲಾಖೆಯ ಮಂತ್ರಿಯೂ ಕೂಡ ಒಬ್ಬ ನಿವೃತ್ತ ಸೇನಾಧಿಪತಿಯೇ ಆಗಿದ್ದಾನೆ!

ಜಪಾನಿನ ರಾಜ್ಯಭಾರದ ಗುಟ್ಟನ್ನು ಸೂತ್ರರೂಪವಾಗಿ ಹೀಗೆ ಹೇಳಬಹುದು: ಹಿಂದೆ ಕಟ್ಟಲ್ಪಟ್ಟ ಚಕ್ರಾಧಿಪತ್ಯಗಳೂ ಕೂಡ ಶಕ್ತಿಯಿಂದಲೆ ಮುಂದೆ ಬಂದುವಲ್ಲದೆ, 'ಅಹಿಂಸಾತತ್ವ'ದಿಂದಲ್ಲ. ಒಂದು ರಾಷ್ಟ್ರದ ಪ್ರಗತಿಗೆ ಸರ್ವಾಧಿಕಾರವು, ಸೈನ್ಯಾಧಿಕಾರವು ಬೇಕೇ ಬೇಕು. ಒಮ್ಮೆ ಆಡಳಿತದ ತಳಹದಿಯು ನಿಧಾನವಾಗಿ, ಗಟ್ಟಿಯಾಗಿ ಸ್ಥಾಪಿತವಾಯಿತೆಂದರೆ, ನಂತರ ಪ್ರಜಾಪ್ರಭುತ್ವತತ್ವವು ಜಾರಿಗೆ ಬಂದರೂ ಚಿಂತೆಯಿಲ್ಲ. ಬ್ರಿಟಿಷರ ಚಕ್ರಾಧಿಪತ್ಯವನ್ನು ಮೊದಲು ಕಟ್ಟುವಾಗ ಶಕ್ತಿ-ಸರ್ವಾಧಿಕಾರ ತತ್ವಗಳೇ ಆಚರಣೆಯಲ್ಲಿ ಬಂದುವು. ಒಮ್ಮೆ ಅಸ್ತಿಭಾರವನ್ನು ಹಾಕಿದ ಮೇಲೆ ಪ್ರಜಾಪ್ರಭುತ್ವತತ್ವದ ಆಚರಣೆಗೆ ಆಸ್ಪದವುಂಟಾಯಿತು. ಶಕ್ತಿವಂತನು ತನಗೆ ತಕ್ಕ ಯೋಚನೆಗಳನ್ನೂ ಕಾರ್ಯಕ್ರಮಗಳನ್ನೂ ಇಟ್ಟುಕೊಳ್ಳುತ್ತಾನೆ. ಶಕ್ತಿಹೀನನಾದವನು 'ಅಹಿಂಸೆ'ಯ ಮಾರ್ಗವನ್ನು ಅನುಸರಿಸುವನು. ಶಕ್ತಿಯಿಂದಲೆ ಮುಕ್ತಿ!

---

# ಜಪಾನದ ಸೈನ್ಯ



೧೮೬೮ರಲ್ಲಿ ರೂಪುಗೊಂಡ ಸರಕಾರವು, ದೇಶಸಂರಕ್ಷಣೆಗಾಗಿ ಸುಸಜ್ಜಿತವಾದ ಸೈನ್ಯವು ಸಿದ್ಧವಿರದಿದ್ದರೆ ದೇಶೋನ್ನತಿಯಾಗಲಾರದೆಂಬ ಮಹತ್ವದ ಮಾತನ್ನರಿತು, ಅದರ ಬೆಳೆವಣಿಗೆಯ ಕಡೆಗೆ ಪೂರ್ಣ ಲಕ್ಷ್ಯಗೊಟ್ಟಿತು. ಇಂದಿಗೆ ಅದರ ಫಲವಾಗಿ ಜಪಾನ ದೇಶದ ಸೈನ್ಯವು, ಸ್ವದೇಶ ರಕ್ಷಣೆಗಾಗಿ ಬಲಿಷ್ಠ ಎದುರಾಳಿಯನ್ನೂ ಪ್ರತಿಭಟಿಸಬಲ್ಲದೆಂಬ ಶಕ್ತಿಯನ್ನು ಸಂಪಾದಿಸಿರುತ್ತದೆ. ಮೇಜಿ ಚಕ್ರವರ್ತಿಗಳೂ ಅವರ ಸರಕಾರವೂ ಈ ಸಿದ್ಧಿಯನ್ನು ಪಡೆದುದು ಅವರ ಕಾರ್ಯದಕ್ಷತೆ ಹಾಗೂ ನಿಜವಾದ ರಾಷ್ಟ್ರ ನಿರ್ಮಾಣ ಮಾಡುವ ಕರ್ತೃತ್ವಶಕ್ತಿಯನ್ನು ತೋರಿಸುತ್ತಿದೆ. ಈ ಸೈನ್ಯದ ಪ್ರಗತಿಪರ ಚರಿತೆಯನ್ನು ನಾಲ್ಕು ಭಾಗ ಮಾಡಿ ವಿವರಿಸಬಹುದು.

(೧) ತೋಕುಗಾವದ ಸರ್ವಾಧಿಕಾರಿಯು ರಾಷ್ಟ್ರಾಭಿಮಾನಿಯಾಗಿ ತನ್ನೆಲ್ಲ ಸೈನ್ಯವನ್ನು ಮೇಜಿ ಚಕ್ರವರ್ತಿಗಳ ವಶಕ್ಕೆ ೧೮೬೭ರಲ್ಲಿ ಅರ್ಪಿಸಿದನು. ಅಂದಿನಿಂದ ಕೇಂದ್ರ ಸರಕಾರದ ಸೈನ್ಯಖಾತೆಯು ಬೆಳೆಯತೊಡಗಿತು. ಕೆಲವು ಪಾಳೆಯಗಾರರು ಇದನ್ನು ಸೈರಿಸದೆ ದಂಗೆಯೆದ್ದರು. ಬಲವಂತವಾಗುತ್ತಿದ್ದ ಕೇಂದ್ರಸರಕಾರವು ಇವರೆಲ್ಲರನ್ನು ಸದೆಬಡಿಯಿತು. ಸೈನ್ಯಬಲವಂತೂ ರಭಸದಿಂದ ಮುಂದುವರಿದಿತು. ಸುಧಾರಣೆಗಳು ಅತ್ಯವಶ್ಯವೆನಿಸಿದ್ದರಿಂದ ಮೇಜಿ ಚಕ್ರವರ್ತಿಗಳು ಸೈನ್ಯ ಶಿಕ್ಷಣಕ್ಕಾಗಿ ಅನೇಕರನ್ನು ಅಮೇರಿಕಾ, ಇಂಗ್ಲಂಡ, ಫ್ರಾನ್ಸ್, ಜರ್ಮನಿ ಮೊದಲಾದ ದೇಶಗಳಿಗೆ ಕಳುಹಿಸಿದರು. ಅವರು ಶಿಕ್ಷಣ ಪಡೆದು ಮರಳಿದ ಮೇಲೆ ಆ ಮಾದರಿಯ ಶಿಕ್ಷಣ ಕೊಡುವ ಶಾಲೆಗಳನ್ನು ತೆರೆದರು. ಭೂಸೈನ್ಯವು ಫ್ರೆಂಚ್ ರೀತಿಯಲ್ಲಿ, ಜಲಸೈನ್ಯವು ಇಂಗ್ಲಿಷ ರೀತಿಯಲ್ಲಿ ತಯಾರಾಗತೊಡಗಿತು. ೧೮೬?ರಲ್ಲಿ (The military cadets' school) ಸೈನ್ಯಶಾಲೆಯು ಸ್ಥಾಪಿತವಾಗಿ ಫ್ರೆಂಚ್ ಶಿಕ್ಷಕರಿಂದ

ಶಿಕ್ಷಣವಾರಂಭವಾಯಿತು. ಏಕರೀತಿಯ ಉಡುಪನ್ನು ಗೊತ್ತುಮಾಡಿದರು. ಭೂ, ಜಲಸೈನ್ಯವೆಂದು ಬೇರ್ಪಡಿಸಿ, ಸರ್ವಸನ್ನಾಹಗಳನ್ನು ಏರ್ಪಡಿಸಿ, ಶಕ್ತಿಯುತವಾದ ಸೈನ್ಯವನ್ನು ಸಿದ್ಧಗೊಳಿಸಲಾಯಿತು.

ಪ್ರತಿಯೊಬ್ಬ ಜಪಾನೀಯನು ಯುದ್ಧದ ಕಾಲಕ್ಕೆ ದುಡಿದು, ಶಾಂತಿ ಕಾಲದಲ್ಲಿ ತಮ್ಮ ತಮ್ಮ ಉದ್ಯೋಗದಲ್ಲಿ ನಿರತರಾಗಬೇಕೆಂದಿದ್ದ ಕಾನೂನು ೧೮೭೩ರಲ್ಲಿ ಸುಧಾರಿಸಿದ ಸ್ವರೂಪವನ್ನು ತಾಳಿತ್ತು. ಇಡೀ ಜಪಾನಿನಲ್ಲಿ ೬ ಠಾಣ್ಯಗಳುಂಟಾದವು; ಪ್ರತಿಯೊಂದರಲ್ಲಿ ೪೦ ಸಾವಿರ ಕಾದಿಟ್ಟ ಸೈನ್ಯವಿರಬೇಕು, ಯುದ್ಧಕಾಲದಲ್ಲಿ ೭೦ ಸಾವಿರ ಸೈನ್ಯವಿರಬೇಕೆಂದು ನಿರ್ಧರಿಸಿತು. ಈ ರೀತಿಯಿಂದ ೬೦ ವರುಷಗಳವಧಿಯಲ್ಲಿ ಸೈನ್ಯಬಲವು ಹೆಚ್ಚಿ ಈಗ ಯುದ್ಧ ಸಮಯದಲ್ಲಿ ಶಿಕ್ಷಿತರಾದ ೪೦ ಲಕ್ಷ ಸೈನಿಕರು ಸದಾ ಸಿದ್ಧರಿರುವದರಿಂದ ಯಾವ ಬಿಳಿಯ ಜನಾಂಗವೂ ಇವರ ಮೈಮೇಲೆ ಬರಲು ಹೆದರುತ್ತಿರುವವು.

ಸನ್ ೧೮೭೩ರಲ್ಲಿ ಕೋರಿಯಾ ದೇಶವು ಜಪಾನದೊಡನೆ ವ್ಯಾಪಾರದ ಕರಾರುಗಳನ್ನು ಮಾಡಿಕೊಳ್ಳಲು ನಿರಾಕರಿಸಿತು. ಅದಕ್ಕಾಗಿ ಯುದ್ಧ ಹೂಡುವುದೇ, ಬಿಡುವುದೇ ಎಂಬ ಬಗ್ಗೆ ಸೈನಿಕ ಮುಖಂಡರಲ್ಲಿ ಭಿನ್ನಾಭಿಪ್ರಾಯವಾಯಿತು. ಸ್ವದೇಶಕ್ಕಾಗಿ ದೇಹವನ್ನು ಸವೆಸಿದ 'ಸುಗಿ ಮೊರಿ ಸೈಗೋ' ಎಂಬ ನಾಯಕನು ಸರಕಾರವು ಯುದ್ಧ ಮಾಡುವುದಿಲ್ಲೆಂಬದನ್ನು ಕಂಡು ತನ್ನ ಹುಟ್ಟಿದ ಸ್ಥಳವಾದ 'ಕ್ಯೂಷು ದ್ವೀಪ'ಕ್ಕೆ ಹೊರಟುಬಿಟ್ಟನು. ಉಗ್ರ ದೇಶಪ್ರೇಮವುಳ್ಳ ಕೆಲ ನಾಯಕರು ಕೇಂದ್ರ ಸರಕಾರದೊಡನೆ ೪ ಸಲ ಯುದ್ಧಮಾಡಿ ಪರಾಜಿತರಾದರು. ಸೈಗೋನು ದೇಶಮರ್ಯಾದೆಗಾಗಿ ಕೇಂದ್ರ ಸರಕಾರದೊಡನೆ ಯುದ್ಧಹೂಡಿ ಮಡಿದರೂ, ಜನರು ಆತನನ್ನು ಇಂದಿಗೂ ದೇವರಂತೆ ಪೂಜಿಸುತ್ತಾರೆ. ದೇಶಪ್ರೇಮದಿಂದ ಮಡಿದ ವೀರರೆಲ್ಲರೂ ದೇವರ ಮೂರ್ತಿಗಳಾಗಿ ಪರಿಣಮಿಸುವರೆಂಬ ಭಾವನೆಯು ಜಪಾನಿನಲ್ಲಿ ರೂಢವಾಗಿರುತ್ತದೆ. ಯಮಗಾತ, ಓಯಾಮ, ಸೈಗೊ ಈ ಮೂರು ತಜ್ಞ ನಾಯಕರನ್ನು 'ಸೈನ್ಯದ ಪಿತಾಮಹ'ರೆಂದು ಜಪಾನಿಯರು ಇಂದಿಗೂ ಪೂಜಿಸುತ್ತಾರೆ.

೧೮೭೪ರಲ್ಲಿ ಫುರುಮೊಸದ್ವೀಪದವರು ಜಪಾನದ ವ್ಯಾಪಾರದ ಹಡಗ

ಗಳ ಮೇಲೆ ಹಲ್ಲೆಯನ್ನೆಸಗಿದರು. ಜಪಾನಿಯ ಸರಕಾರವು ಅದನ್ನಡಗಿಸಲು ಸಾವಿರ ಮೈಲಿನ ಮೇಲಿರುವ ಈ ದ್ವೀಪಕ್ಕೆ ೩೬೭೦ ಸೈನಿಕರನ್ನು ಕಳುಹಿ, ಜಯಶೀಲವಾಗಿ ಅವರಿಂದ ಸವಲತ್ತಿನ ಕರಾರುಗಳನ್ನು ಪಡೆಯಿತು.

ಮೇಜಿ ಚಕ್ರವರ್ತಿಗಳು ತಮಗೆ ಸಲ್ಲತಕ್ಕ ಕಡಿಮೆ ಹಣದಲ್ಲಿಯೆ ವರುಷಕ್ಕೆ ೩೬೦೦೦ ಎನ್ನುಗಳನ್ನು ಸೈನ್ಯದ ಪ್ರಗತಿಗಾಗಿ ಕೊಡಲಾರಂಭಿಸಿ, ಹಾಗೆಯೆ ಇನ್ನುಳಿದ ಅರಮನೆಯ ಅಧಿಕಾರಿಗಳೂ ಮಿತವ್ಯಯದಿಂದ ಜೀವಿಸಿ ಉಳಿದ ಹಣವನ್ನೂ ಇದಕ್ಕಾಗಿ ಕೊಡಬೇಕೆಂದು ಪ್ರೋತ್ಸಾಹಿಸಿದರು. ಚಕ್ರವರ್ತಿಯೇ ಕೊಟ್ಟು, ಕೊಡೆಂದು ಹೇಳುವಾಗ ಇತರರು ಸುಮ್ಮನಿರ-ಲಿಕ್ಕಾದೀತೆ? ಎಲ್ಲರಿಂದಲೂ ಹಣವು ಸಲ್ಲತೊಡಗಿ ಸೈನ್ಯದ ಪ್ರಗತಿಯು ಮಿತಿಮೀರಿ ಬೆಳೆಯಲವಕಾಶವಾಯಿತು.

(೨) ಭದ್ರವಾದ ಸರಕಾರವು ಸನ್ ೧೮೮೫ರಲ್ಲಿ ಮಂತ್ರಿಕೂಟವನ್ನು ಸ್ಥಾಪಿಸಿ, ಸೈನ್ಯಖಾತೆಯು ನಿರರ್ಗಲವಾಗಿ ಸಾಗುವಂತೆ ಅನೇಕ ಬದಲಾವಣೆ ಯನ್ನು ಮಾಡಿತು. ೧೮೯೦ರಲ್ಲಿ ಸ್ಥಾಪಿತವಾದ ರಾಜಸಭೆಯಲ್ಲಿ ಸೈನ್ಯದ ಮುಖ್ಯಾಧಿಕಾರವು ಒಪ್ಪಿಸಲ್ಪಟ್ಟಿತು. ಮುಖ್ಯ ಸೇನಾನಾಯಕನಾದ ಯಮಗಾತನು ದೇಶೋದ್ಧಾರಕ್ಕಾಗಿ ಬಲಯುತವಾದ ಸೈನ್ಯವಿರಲೇ ಬೇಕೆಂದು ಪ್ರಚುರಪಡಿಸಿದನು. ಅವನ ಯತ್ನದಿಂದ ಜಪಾನದ ಸೈನ್ಯವು ಬೆಳೆದುದರಿಂದ ಅವರ ಸನ್ನಾಹಕ್ಕಾಗಿ ವ್ಯಾಪಾರದ ದೆಶೆಯಿಂದ ಸರಕಾರವು ಅಳತೆಗೆಟ್ಟು ಹಣವನ್ನು ವೆಚ್ಚಮಾಡಿತು. ದೇಶದಲ್ಲಿ ಶಾಂತಿಯು ನೆಲೆಗೊಂಡ ಮೇಲೆ, ದಡಗಳ ರಕ್ಷಣೆಗೆ ಬೆನ್ನುಹತ್ತಿದರು. ಬ್ಯಾಟರಿಗಳನ್ನು ಕಟ್ಟುವು ದಕ್ಕೆ ಫ್ರಾನ್ಸದವರಿಂದ ತಕ್ಕ ಸಲಹೆಗಳನ್ನು ಪಡೆದರು. ೧೮೮೨ರಲ್ಲಿ ಸೈನ್ಯ ಶಿಕ್ಷಣ ಮಂದಿರವು (Military academy) ಸ್ಥಾಪಿಸಲ್ಪಟ್ಟಿತು. ಸೈನ್ಯ ಶಿಕ್ಷಣದ ರಹಸ್ಯಗಳನ್ನೆಲ್ಲ ತಿಳಿದುಕೊಂಡು, ಆ ತೆರದಿಂದ ಸೈನ್ಯವು ತಯಾರಾ ಯಿತು. ೧೮೮೯ರಲ್ಲಿ ೧೭ರಿಂದ ४೦ ವರುಷಗಳೊಳಗಿನ ಪ್ರತಿಯೊಬ್ಬ ಜಪಾನಿ ಯನು ಸೈನ್ಯಶಿಕ್ಷಣವನ್ನು ಪಡೆಯಲೇಬೇಕೆಂಬ ಕಟ್ಟಳೆಯಾಯಿತು. ಇಂಥ ಪರಿಸ್ಥಿತಿಯಲ್ಲಿ ಜಪಾನವು ಬಿಳಿಯರ ಬಗಲಿಗೆ ಬೀಳದಿರುವದು ಆಶ್ಚರ್ಯ ಕರ ಮಾತಾಗಿದೆ. ರಾಷ್ಟ್ರಾಭಿಮಾನ ಜಾಗೃತವಿರದಿದ್ದರೆ ಜಪಾನ ದೇಶವು ಪಾರತಂತ್ರ್ಯ ಪಾಶದಲ್ಲಿ ಸಿಲುಕಬಹುದಾಗಿದ್ದಿತು.

೧೮೯೪ರಲ್ಲಾದ ಚೀನಾ-ಜಪಾನ ಯುದ್ಧವು ೧೦ ತಿಂಗಳು ನಡೆಯಿತು; ಜಪಾನಿಯರು ಜಯಶೀಲರಾದರು.* ಜಯದ ಫಲವಾಗಿ ೧೪೦೦೦ ಚದರ ಮೈಲು ಕ್ಷೇತ್ರವುಳ್ಳ 'ಫರಮೊಜಾ' ಎಂಬ ದ್ವೀಪವು ಜಪಾನಿಯರಿಗೆ ದೊರೆಯಿತಲ್ಲದೆ, ಚೀನಾದೇಶದಿಂದ ೧ ಕೋಟಿ ಎನ್ನುಗಳ ಕಪ್ಪ-ಕಾಣಿಕೆಯು ಸಲ್ಲುವಂತಾಯಿತು. ಜಪಾನವು ಈ ಯುದ್ಧಕ್ಕಾಗಿ ೨೦ ಕೋಟಿ ಎನ್ನುಗಳನ್ನು ವೆಚ್ಚಮಾಡಿತು. ಅಂದಿನ ಆರ್ಥಿಕ ಸ್ಥಿತಿಯಲ್ಲಿ ೨೦ ಕೋಟಿ ಎನ್ನುಗಳ ಭಾಂಡವಲದಿಂದ ಸಾಗಿದ್ದ ಕೈಗಾರಿಕೆಗಳು ಕೆಲಕಾಲದ ವರೆಗೆ ನಿಲ್ಲಿಸಲ್ಪಟ್ಟವು.

(೩) ೧೯ನೆಯ ಶತಮಾನದ ಕೊನೆಯಲ್ಲಿ ಜಪಾನವು ತನ್ನ ದರ್ಪವನ್ನು ನೆರೆಹೊರೆಯ ಪ್ರಾಂತಗಳಲ್ಲಿ ಕುಳ್ಳಿರಿಸುವಾಗ ಯುರೋಪದ ಕೆಲ ದೇಶಗಳು ಚೀನಾದೇಶವನ್ನು ನುಂಗಲು ಯತ್ನಿಸುತ್ತಿದ್ದವು. ೧೮೯೮ರಲ್ಲಿ ಜರ್ಮನಿಯು ಚೀನಾ ದೇಶದಿಂದ 'ಕೈಚೋಟೋ' ಪ್ರದೇಶವನ್ನು ಲಾವಣಿಗೆ ಪಡೆಯಿತು. ರಶಿಯಾ ದೇಶವೂ ಕೂಡ 'ಕರ್ದಟಂಗ್' ಪ್ರದೇಶವನ್ನು ಲಾವಣಿಗೆ ಪಡೆಯಿತಲ್ಲದೆ, ದಕ್ಷಿಣ ಮಂಚೂರಿಯಾದಲ್ಲಿ ರೇಲ್ವೆಯನ್ನು ಸ್ಥಾಪಿಸಲು ಅಧಿಕಾರ ಪಡೆಯಿತು. ಹೀಗೆ ಪರದೇಶಿಯರು ಚೀನಾ ದೇಶವನ್ನು ಹರಿದು ತಿನ್ನುವುದನ್ನು ಚೀನೀಯರು ಕಂಡು ಸೈರಿಸದೆ ಪೇಕಿಂಗ್ ಪಟ್ಟಣದಲ್ಲಿ ದಾಳಿಯನ್ನೆಬ್ಬಿಸಿ ಪರದೇಶಿಯರನ್ನು ಸಿಕ್ಕಿದಲ್ಲಿ ಸಂಹರಿಸಲಾರಂಭಿಸಿದರು. ದಂಗೆಯನ್ನು ಅಡಗಿಸಲು ರಶಿಯವೂ ಇತ್ತ ಸೈನ್ಯವನ್ನು ಕಳುಹಿಸಿತು; ಅತ್ತ ಇಂಗ್ಲಿಷರ ಇಚ್ಛೆಯಂತೆ ಜಪಾನವೂ ಸೈನ್ಯವನ್ನಟ್ಟಿತು. ದಂಗೆಯು ನಿಂತಮೇಲೆ ರಶಿಯಾ ದೇಶವು ತನ್ನ ಸೈನ್ಯವನ್ನು ಮಂಚೂರಿಯದಲ್ಲಿಯೆ ಇರಿಸಿತು. ಇದರಿಂದ ಇಂಗ್ಲಿಷರು ತಮ್ಮ ಆಸ್ತಿ-ಪಾಸ್ತಿಯನ್ನು ರಶಿಯನ್ನರು ಎತ್ತಿಹಾಕಬಹುದೆಂಬ ಬೆದರಿಕೆಯಿಂದ ಜಪಾನದ ಸ್ನೇಹವನ್ನು ಮಾಡಿದರು. ರಶಿಯನ್ನರ ದೊಡ್ಡ ಪಡೆಯು ಹತ್ತಿರದಲ್ಲಿರುವದು ಜಪಾನಿಯರಿಗೆ ಸರಿಬೀಳದಿದ್ದರೂ, ಇವರು ಇಂಗ್ಲಿಷರ ಚಾಣಕ್ಯತಂತ್ರದಿಂದ ಪ್ರೇರಿತರಾಗಿ ಅವರೊಡನೆ ವೈರ ಭಾವವನ್ನು ತಾಳಿದರು. ಜಪಾನವು ರಶಿಯದೊಡನೆ ಯುದ್ಧಸಮಯ ಒದಗಿದರೆ ಇಂಗ್ಲಿಷರು ಹಣದ ಸಹಾಯವನ್ನು ಮಾಡಲು ವಚನಬದ್ಧರಾಗಿದ್ದರು.

ರಶಿಯಾದವರು ೫ ಸಾವಿರ ಮೈಲುಗಳ ದೂರಿನಿಂದ ಇಲ್ಲಿ ಬಂದು ಶಕ್ತಿವಂತರಾಗಿ ಬಾಳಿದರೆ ತಮಗೆ ಕಂಟಕರಾಗುಳಿಯುರೆಂದು ಜಪಾನಿಯರು ಯುದ್ಧವನ್ನು ಹೂಡಿಯೇ ಬಿಟ್ಟರು. ಯುದ್ಧವು ೧೬ ತಿಂಗಳಗಳ ವರೆಗೆ ನಡೆಯಿತು. ಜಪಾನದ ಜಲಸೈನ್ಯವು ರಶಿಯಾದವರ ಯುದ್ಧದ ಹಡಗಗಳನ್ನು ಬಾಲಟಿಕ್ ಸಮುದ್ರದಲ್ಲಿ ಸೋಲಿಸಿದರು. ಭೂಸೈನ್ಯವೂ ಜಯಸಂಪಾದಿಸಿತು. ಜಪಾನಿಯರು ರಶಿಯದವರನ್ನು ಗೆದ್ದು ಬಿಳಿಜನಾಂಗದವರು ತಳೆದ ಶ್ರೇಷ್ಠತೆಯ ಅಹಂಭಾವವನ್ನು ನಾಶಗೊಳಿಸಿತು. ಹಿಂದಕ್ಕೆ ರಶಿಯನ್ನರು ನೆಪೋಲಿಯನ್ನನನ್ನು ಸೋಲಿಸಿದ್ದರು. ಅಂಥ ರಶಿಯದವರನ್ನೇ ತಾವು ಜಯಿಸಿರುವೆವೆಂದು ಕೆಲ ಉಗ್ರ ಜಪಾನಿಗಳು ಜಂಭಕೊಚ್ಚಿಕೊಳ್ಳದಿರಲಿಲ್ಲ. ೧೦ ಲಕ್ಷ ಜಪಾನಿಯರು ಯುದ್ಧದಲ್ಲಿ ತೊಡಗಿದ್ದರು. ೧೫೦ ಕೋಟಿ ಎನ್ನು ವೆಚ್ಚವಾಯಿತು. ಇಂಗ್ಲಿಷರು ವಚನವಿತ್ತಂತೆ ೧೦೦ ಕೋಟಿ ಎನ್ನುಗಳ ಸಾಲವನ್ನು ಕಡಿಮೆ ಬಡ್ಡಿಯ ದರದಿಂದ ಜಪಾನಕ್ಕೆ ಕೊಟ್ಟರು. ರಶಿಯನ್ನರು ತಮ್ಮ ಸೌಕರ್ಯಕ್ಕಾಗಿ ಹಾಕಿದ ರೇಲ್ವೆಯು ಜಪಾನಿಯರಿಗೆ ಅನಾಯಾಸವಾಗಿ ದೊರೆತುದಲ್ಲದೆ ೮೪ ಸಾವಿರ ಚದರ ಮೈಲುಗಳ ಕ್ಷೇತ್ರವುಳ್ಳ 'ಕೋರಿಯಾ' ದೇಶವು ಜಪಾನದ ವಶವಾಯಿತು. ಜಪಾನದ ಚಕ್ರಾಧಿಪತ್ಯವು ಸ್ಥಿರವಾಗಿ, ಸುಸೂತ್ರವಾಗಿ ನೆಲೆಗೊಳ್ಳಲು ಬೇಕಾದಷ್ಟು ಅನುವಾಯಿತು. ಮೇಜಿ ಚಕ್ರವರ್ತಿಗಳು ರಾಜಧಾನಿಗೆ ೬೨೦ ಮೈಲು ದೂರವಿರುವ 'ಷಿಮೂಗೊನಾಕಿ' ಎಂಬಲ್ಲಿ ಒಂದು ವರ್ಷದ ವರೆಗೆ ತಮ್ಮ ಬಿಡಾರವನ್ನು ಮಾಡಿಕೊಂಡು ತಾವೇ ಸ್ವಂತವಾಗಿ ಯುದ್ಧದ ಮೇಲ್ವಿಚಾರಣೆಯನ್ನು ನಡೆಯಿಸುತ್ತಿದ್ದರು. ಸೈನಿಕರು ಯುದ್ಧದ ಕಾಲದಲ್ಲಿ ಹೇಗೆ ವರ್ತಿಸಬೇಕೆಂಬ ಬಗ್ಗೆ (೧) ಭೂ-ಜಲ ಸೈನಿಕರು ರಾಜನಿಷ್ಠೆಯನ್ನು ತಮ್ಮ ಪ್ರಥಮಕರ್ತವ್ಯವೆಂದು ಭಾವಿಸತಕ್ಕದ್ದು. (೨) ಅಸ್ತ್ರಪಾಸ್ತ್ರಗಳನ್ನು ರಕ್ಷಿಸುವದರಲ್ಲಿ ದಕ್ಷರಾಗಿರತಕ್ಕದ್ದು. (೩) ಶೌರ್ಯವನ್ನು ಮರ್ಯಾದಿಸತಕ್ಕದ್ದು. (೪) ವಿಶ್ವಾಸವನ್ನೂ, ನೀತಿಧರ್ಮವನ್ನೂ ಪಾಲಿಸತಕ್ಕದ್ದು. (೫) ಸರಳತೆಯನ್ನು ತಮ್ಮ ಜೀವನದ ಮುಖ್ಯ ಗುರಿಯನ್ನಾಗಿಟ್ಟುಕೊಳ್ಳತಕ್ಕದ್ದು; ಎಂಬಿವೇ ಮೊದಲಾದ ಕಟ್ಟಳೆಗಳುಂಟಾದವು. ಹೀಗೆ ೧೯೦೫ರ ಹೊತ್ತಿಗೆ ಜಪಾನುದೇಶವು ಅಂತರ್‌ರಾಷ್ಟ್ರೀಯ ಯುದ್ಧಗಳೆರಡರಲ್ಲಿ ಜಯ ಸಂಪಾದಿಸಿದ್ದರಿಂದ ಮುಂದ

ರಿದ ರಾಜ್ಯಗಳಲ್ಲಿ ಗಣ್ಯಸ್ಥಾನವನ್ನು ಪಡೆಯಿತು. ಮಹಾಯುದ್ಧದ ಕಾಲಕ್ಕಂತೂ ಜಪಾನವು ೪ ಕುದುರೆ ಪಡೆ, ೩ ಮಹಾಸೇನೆ(field brigades) ೫ ವಾಯು ತಂಡ, ೨ ರೇಲ್ವೆ ಪಡೆ, ೧ ತಂತಿ ಪಡೆ, ೧ ಮೋಟಾರು ತಂಡ, ೩ ತೋಫುಗಳ ತಂಡ, ೪ ಕಾಲ್ಬಲ ಹೀಗೆ ೨೩ ಭಾಗಗಳಾಗಿ ತಮ್ಮ ಸೈನ್ಯದ ಸಿದ್ಧತೆಯನ್ನು ಮಾಡಿಕೊಂಡಿದ್ದರು.

(೪) ಮಹಾಯುದ್ಧವು ಪ್ರಾರಂಭವಾದೊಡನೆ ಜಪಾನಿಯರು ಇಂಗ್ಲಿಷರೊಡನೆ ಆದ ಒಪ್ಪಂದದ ಮೇರೆಗೆ ಜರ್ಮನಿಯ ಮೇಲೆ ಯುದ್ಧ ಮಾಡುವೆವೆಂದು ಪ್ರಕಟಿಸಿದರು. ಚೀನಾದೇಶದಲ್ಲಿಯ ಜರ್ಮನಿಯರ "ಷನ್ ತುಂಗ್" ಪ್ರದೇಶವನ್ನು ಆಡಾಡುತ್ತ ಆಕ್ರಮಿಸಿಯೇ ಬಿಟ್ಟರು. ರಶಿಯಾ ದೊಡನೆ ಬೆಳೆದ ಸ್ನೇಹದಿಂದ ಪೂರ್ವಭಾಗದಲ್ಲಿದ್ದ ಅವರ ಸೇನೆಯನ್ನು ಜರ್ಮನಿ ಯವರ ಮೇಲೆ ಯುದ್ಧಮಾಡುವದಕ್ಕೆ ಕರೆಯಿಸಿಕೊಳ್ಳಲು ಅನುಕೂಲ ವಾಯಿತು. ಚೀನಾದೇಶದಲ್ಲಿ ಜಪಾನಿಗೆ ಹೆಚ್ಚು ಮನ್ನಣೆಯಿರಬೇಕೆಂದಿದ್ದ ಮಾತು ವರ್ಸಲಿಸ್ ಒಪ್ಪಂದದಲ್ಲಿ ನಿರಾಕರಿಸಲ್ಪಟ್ಟು ಜರ್ಮನಿಯ ಕೆಲವು ದ್ವೀಪಗಳು ಮಾತ್ರ ಜಪಾನಿಯರ ಮೇಲ್ವಿಚಾರಣೆಗೊಳಪಟ್ಟವು.

ಮಹಾಯುದ್ಧವು ಮುಗಿದ ನಂತರ ಸೈನ್ಯದ ಬಲವನ್ನು ಕಡಿಮೆ ಮಾಡುವ ತತ್ವವು ಜಪಾನಿಗೂ ಅನ್ವಯಿಸಿದ್ದರಿಂದ ಯುದ್ಧಮಂತ್ರಿಗಳು ಕೆಲವೊಂದು ದಳಗಳನ್ನು ರದ್ದುಗೊಳಿಸಿದರು. ಆದರಿಂದ ದೇಶದಲ್ಲಿ ಭಿನ್ನಾ ಭಿಪ್ರಾಯವುಂಟಾಗಿದೆ; ಇಂದು (೧೯೩೪) ಜನರಲ್ ಉಗಾಕಿಯವರು (ಇವರು ತಮ್ಮ ಮೊದಲಿನ ಆಡಳಿತೆಯಲ್ಲಿ ಕೆಲವು ಸೈನ್ಯಪಡೆಯನ್ನು ಕಡಿಮೆ ಮಾಡಿದ್ದರು.) ಮುಖ್ಯ ಮಂತ್ರಿಪದವನ್ನು ಪಡೆಯಲು ತೊಂದರೆಯುಂಟಾ ಗಿದೆ. ಉಗಾಕಿಯವರು ಕಳೆದ ಕೆಲವು ತಿಂಗಳುಗಳಿಂದ ಪರದೇಶಾಂಗದ ಮಂತ್ರಿಗಳಾಗಿ ಕೆಲಸಮಾಡುತ್ತಿದ್ದಾರೆ. ಮತ್ತೆ ಸೈನ್ಯದವರೊಡನೆ ಮನ ಸ್ತಾಪವುಂಟಾಗಲು ಅವರು ಅಕ್ಟೋಬರ್ ತಿಂಗಳಿನಲ್ಲಿ ತಮ್ಮ ಕೆಲಸಕ್ಕೆ ರಾಜಿನಾಮೆಯನ್ನು ಕೊಟ್ಟುಬಿಟ್ಟಿರುವರು.

ಕೋರಿಯಾದಲ್ಲಿದ್ದ ಜಪಾನಸೈನ್ಯವು ಮಂತ್ರಿಕೂಟದ ಅನುಮತಿ ಯಿಲ್ಲದೆ ೧೯೩೧ರಲ್ಲಿ ಮಂಚೂರಿಯವನ್ನಾಕ್ರಮಿಸಿತು. ಚೀನಾದ ಸೇನಾ

ನಾಯಕರು ಯುದ್ಧವನ್ನು ಮಾಡದೆ ಅವರಿಂದ ಯಥೇಚ್ಛವಾಗಿ ಲಂಚವನ್ನು ತಿಂದು ಜಪಾನಿಯವರಿಗೆ ಮಾರ್ಗಮಾಡಿಕೊಟ್ಟರು. ಈ ರೀತಿಯು ಇವರ ಕಾರ್ಯಸಾಧಕತೆಯನ್ನು ಕಂಡು ಜನಾಂಗ ಸಂಘದವರು ಖಂಡಿಸಲು ಜಪಾನಿಯರು ಸಂಘಕ್ಕೆ ಶರಣುಹೊಡೆದು ಕೂಗಾಡಲಾರಂಭಿಸಿದರು. ಅಮೇರಿಕೆಯವರು ಚೀನೀಯರ ಸಹಾಯಕ್ಕಾಗಿ ಇಂಗ್ಲಿಷರ ಸಹಾಯವನ್ನಪೇಕ್ಷಿಸಿದರು. ಆದರೆ ಇಂಗ್ಲಿಷನವರು ಜಪಾನಿಯರ ಮೇಲೆ ಬೀಳಲು ಮನಸುಮಾಡಲಿಲ್ಲ. ಆದ್ದರಿಂದ ಅಮೇರಿಕದವರು ತೆಪ್ಪಗೆ ಕುಳಿತುಕೊಂಡರು. ಜಪಾನವು ತಾನು ಆಕ್ರಮಿಸಿದ ಮಂಚೂರಿಯದಲ್ಲಿ ಅನುಕೂಲವಾದ ರೀತಿಯಲ್ಲಿ ಆಶ್ರಿತಚಕ್ರಾಧಿಪತ್ಯವನ್ನು ೧೯೩೩ರಲ್ಲಿ ಸ್ಥಾಪಿಸಿತು.

ಮಹಾಯುದ್ಧದ ಮೊದಲು ಗ್ರೇಟ್‌ಬ್ರಿಟನ್ ಮತ್ತು ಫ್ರಾನ್ಸ್‌ರಾಜ್ಯಗಳು ತಮ್ಮ ಭದ್ರತೆಗಾಗಿ "ಪ್ರಜಾಧಿಪತ್ಯ" ವನ್ನು ಉದ್ಧರಿಸುವ ನೆವದ ಮೇಲೆ ಪ್ರಪಂಚದವರ ಸಹಾಯವನ್ನು ಹೊಂದಿ ಜರ್ಮನಿಯನ್ನು ಸೋಲಿಸಿದವು. ಆದರೆ ಯುದ್ಧ ಮುಗಿದ ಮೇಲೆ ಪ್ರಜಾಧಿಪತ್ಯವಿದ್ದ ಯಾವ ರಾಷ್ಟ್ರಗಳಿಗೆ ಇವರು ನೆರವಾಗಿದ್ದಾರೆ? ಗ್ರೇಟ್‌ಬ್ರಿಟನ್‌ವು ವಚನವಿತ್ತಂತೆ ಅರಬಸ್ಥಾನ, ಹಿಂದುಸ್ಥಾನಗಳಲ್ಲಿ ಪ್ರಜರ ಆಡಳಿತವು ಸ್ಥಾಪನವಾಯಿತೇ? ಇಂಗ್ಲಿಷರ ನೇತೃತ್ವದಲ್ಲಿ ಸ್ಥಾಪಿತವಾದ "ಅಂತರ್‌ರಾಷ್ಟ್ರೀಯ ಸಂಘ" ದಲ್ಲಿ ಜಪಾನಿಯರು "ಸರ್ವ ಜನಾಂಗಗಳು ಸಮಾನಾಧಿಕಾರವುಳ್ಳವು" ಎಂದು ತಂದ ಠರಾವು ಇಂಗ್ಲಿಷರ ಪಕ್ಷಪಾತದಿಂದ ಬಿದ್ದುಹೋಗಲಿಲ್ಲವೆ? ಅಂದು ಇಂಗ್ಲಿಷರು ತಮ್ಮ ಸಾಮ್ರಾಜ್ಯವನ್ನುಳುಹಿಕೊಳ್ಳಲು ಬಾಂಬು ಚೆಲ್ಲುವ ಅಧಿಕಾರವನ್ನು ಉಳುಹಿಕೊಂಡದ್ದಾದರೂ ಏಕೆ? ಇಂದು ಬೇರೆಯವರು ಬಾಂಬೆಸೆದರೆ ಇವರಿಗಾಗುವ ಹೊಟ್ಟೆಯುರಿಯು ಏಕೋ ಏನೋ ತಿಳಿಯದಾಗಿದೆ. ಇದೆಲ್ಲವೂ ಸಾಮ್ರಾಜ್ಯಲಾಲಸೆಯಲ್ಲದೆ ಮತ್ತೇನು? ಹಾಗೆಯೇ ಜಪಾನವೂ ತನ್ನ ಚಕ್ರಾಧಿಪತ್ಯವನ್ನು ಸಂದರ್ಭಕ್ಕನುಸರಿಸಿ ವರ್ತಿಸಿ, ಬಲಿಸಿ, ಇಂದಿಗೆ ತಲೆಯೆತ್ತಿ ಮೆರೆಯುತ್ತಿದೆ.

ಜಪಾನಿನ ಸೈನ್ಯದ ಒಟ್ಟು ಖರ್ಚು ೧೯೨೦ರಿಂದ ೧೯೩೦ರ ವರೆಗೆ ೨೦ ಕೋಟಿ ಎನ್ನುಗಳಿತ್ತು. ೧೯೩೧ರಲ್ಲಿ, ಮಂಚೂರಿಯವು ವಶವಾದಂದಿನಿಂದ

೧೯೩೬ರ ವರೆಗೆ ಸುಮಾರು ೪೦ ಕೋಟಿ ಎನ್ನುಗಳ ವರೆಗೆ ಏರಿತು. ೧॥ ವರುಷದಿಂದ ಸಾಗಿರುವ ಯುದ್ಧಕ್ಕಾಗಿ ನೂರಾರು ಕೋಟಿ ಎನ್ನುಗಳು ಈಗಾಗಲೆ ವೆಚ್ಚವಾಗಿವೆ. ಇಡಿ ಸೈನ್ಯಖಾತೆಯಲ್ಲಿ ಎಷ್ಟು ಜನರಿದ್ದಾರೆಂಬುವದು ಕೂಡ ಗುಪ್ತವಾಗಿಯೆ ಇದೆ. *

---

* ಪ್ರಚಲಿತ ಯುದ್ಧದಲ್ಲಿ ಈಗ ಜಪಾನ ಸೈನ್ಯವು ಚೀನಾದಲ್ಲಿ ಅನುಸರಿಸುತ್ತಿರುವ ಕ್ರಮ, ಅದರ ಧ್ಯೇಯ ಮೊದಲಾದ ವಿವರಣೆಯನ್ನು ಕೊನೆಯ ಅಧ್ಯಾಯದಲ್ಲಿ ಕೊಡಲಾಗಿದೆ.

# ಜಪಾನಿನ ಹಡಗುಪಡೆ



ಯುದ್ಧನಾವೆಯಲ್ಲಿ ಹೆಸರಾಗಿರುವ ಬ್ರಿಟನ್, ಅಮೇರಿಕಾ, ಫ್ರಾನ್ಸ್, ಇಟಲಿ ಮೊದಲಾದ ದೇಶಗಳಲ್ಲಿ ಜಪಾನವೂ ಒಂದು ಎಂದು ಗಣಿಸಲ್ಪಟ್ಟಿದೆ. ಮೇಲೆ ಕಾಣಿಸಿದ ದೇಶಗಳಲ್ಲಿ ಅಮೇರಿಕವು ಮೊದಲನೆಯದು, ಬ್ರಿಟನ್ನವು ಎರಡನೆಯದು, ಮೂರನೆಯದೇ ಜಪಾನು. ಇಂದಿಗೆ ಜಪಾನವು ಈ ಯುದ್ಧ ನಾವೆಯಿಂದ ಕೀರ್ತಿಸಂಪನ್ನವಾಗಿದೆ. ಜಪಾನವು ಬೇರೆಯವರ ಸಮುದ್ರ ಗಳಲ್ಲಿ ತನ್ನ ಯುದ್ಧನಾವೆಯ ಕೀರ್ತಿಯನ್ನು ಬೆಳಗಿಸಲಿಕ್ಕೆ ಸಾಧ್ಯವಿಲ್ಲದಿ ದ್ದರೂ, ತನ್ನ ಸಮುದ್ರದಲ್ಲಿ ಮಾತ್ರ ತನ್ನ ಚಟುವಟಿಕೆಗಳಿಗೆ ಯಾವ ವಿಧದಿಂ ದಲೂ ನಷ್ಟವಾಗದಂತೆ ಬಹು ಜಾಗರೂಕತೆಯಿಂದ ರಕ್ಷಿಸಿಕೊಳ್ಳುವ ಸಾಮರ್ಥ್ಯವುಳ್ಳದ್ದಾಗಿದೆ. ಜಗತ್ತಿನ ಶಾಂತತೆಗೆ ಯುದ್ಧನಾವೆಯನ್ನು ಕಡಿಮೆ ಮಾಡುವದು ನ್ಯಾಯವಾದರೂ, ಜಪಾನು ತನ್ನ ಪ್ರಜೆಗಳ ಮೇಲೆ ವಿಪರೀತ ಸುಂಕವನ್ನು ಹೇರಿ, ಆ ಹಣದಿಂದ ಭದ್ರವಾದ ಯುದ್ಧನಾವೆಯನ್ನು ಮಾರ್ಪಡಿಸಿಕೊಂಡು ಆಧ್ಯತೆಯಿಂದ ಮೆರೆಯುತ್ತಲಿದೆ.

ಜಪಾನವು ೫೦ ವರುಷಗಳ ಹಿಂದೆ ಹೊಸಪದ್ಧತಿಯ ಹಡಗುಗಳನ್ನು ಕಟ್ಟುವದಕ್ಕೆ ಮೊದಲುಮಾಡಿತು; ಈಗ ಆರು ಲಕ್ಷ ಟನ್ನುಗಳ ವರೆಗಿನ ಯುದ್ಧದ ಹಡಗುಗಳನ್ನು ಸಿದ್ಧಪಡಿಸಿಕೊಂಡಿರುವದಲ್ಲದೆ, ೮೦ ಸಾವಿರ ಜಲ ಸೈನಿಕರನ್ನೂ ಸಿದ್ಧಮಾಡಿಕೊಂಡಿರುವದು. ಅತಿ ವೇಗವುಳ್ಳ ವಿಸ್ತಾರವಾದ ಯುದ್ಧದ ಹಡಗವನ್ನು ಮೂರೇ ವರ್ಷಗಳಲ್ಲಿ ಕಟ್ಟುವ ಶಕ್ತಿಯನ್ನು ಗಳಿಸಿ ಕೊಂಡಿರುತ್ತದೆ. ಕಳೆದ ಶತಮಾನದಲ್ಲಿ ಬಿಳಿ ಜನಾಂಗಗಳು ಇವರ ಮೇಲೆ ಹಲ್ಲೆಯನ್ನು ಮಾಡಿದ್ದರ ಪರಿಣಾಮವಾಗಿ ಜಪಾನಿಯರು ಇಂದಿಗೆ ಇಷ್ಟು ನಿಷ್ಣಾತರಾಗುವದಕ್ಕೆ ಕಾರಣವಾಯಿತು.

ಜಪಾನಿನ ಚಕ್ರಾಧಿಪತ್ಯವು ಸಾವಿರಾರು ದ್ವೀಪಗಳಿಂದುಂಟಾಗಿರುವದರಿಂದ, ಶಾಂತಿಸಾಗರದಲ್ಲಿ ಮುಖ್ಯ ಸ್ಥಳವನ್ನು ವಹಿಸಿರುವದರಿಂದ ಇಲ್ಲಿಯವರು ಜಲಸೈನಿಕರಾಗಲು ತಕ್ಕ ಅನುಕೂಲತೆಗಳು ಸಹಜವಾಗಿ ದೊರೆತಿವೆ. ಜಪಾನಿಯರು ಈ ಕಾರಣದಿಂದಲೇ ಪೂರ್ವಕಾಲದಿಂದಲೂ ದೊಡ್ಡ ಹಡಗು ಪಡೆಯುಳ್ಳವರಾಗಿ ನೆರೆಹೊರೆಯ ಪ್ರಾಂತಗಳ ಮೇಲೆ ಹಲ್ಲೆಯನ್ನು ಮಾಡುತ್ತಲಿದ್ದರೆಂಬುವದು ಇಲ್ಲಿಯ ಇತಿಹಾಸದಿಂದ ತಿಳಿಯಬಹುದಾಗಿದೆ. ಮೂರನೆಯ ಶತಮಾನದಲ್ಲಿ ಜಿಂಗು ಚಕ್ರವರ್ತಿಯೂ ದೊಡ್ಡ ಯುದ್ಧನಾವೆಯೊಡನೆ ಕೋರಿಯಾದೇಶವನ್ನು ಮುತ್ತಿ ಕಪ್ಪ-ಕಾಣಿಕೆಗಳನ್ನು ತಂದಿದ್ದಾನೆ.

ಆರನೇ ಶತಮಾನದ ಮಧ್ಯದಲ್ಲಿ ಚೀನಾದೇಶದ ಆಕ್ರಮಣದಿಂದ ಕೋರಿಯಾ ದೇಶವು ಜಪಾನಿಯರ ಕೈಬಿಟ್ಟಿತು. ಹನ್ನೆರಡನೇ ಶತಮಾನದಲ್ಲಿ ಮಂಗೋಲಿಯನ್ನರು ಜಪಾನದ ಮೇಲೆ ದಂಡೆತ್ತಿ ಬಂದಾಗ, ಅವರೊಡನೆ ಯುದ್ಧಮಾಡುವದಕ್ಕೆ ಜಪಾನಿಗೆ ಯುದ್ಧನಾವೆಗಳ ಸಹಾಯವಿಲ್ಲದ್ದರಿಂದ ಸೋಲು ಸಹಜವಾಗಿತ್ತು. ಆದರೆ ದೈವವಶದಿಂದ ಭಯಂಕರ ಬಿರುಗಾಳಿ ಬಿಟ್ಟು ಮಂಗೋಲಿಯನ್ನರ ಹಡಗುಗಳು ನಾಶವಾಗಿದ್ದರಿಂದ ಜಪಾನಿಯರ ಸ್ವಾತಂತ್ರ್ಯವು ನಷ್ಟವಾಗಲಿಲ್ಲ. ಈ ಅನುಭವದಿಂದ ಸರಕಾರವು ಹಡಗುಗಳ ನಿರ್ಮಾಣಕ್ಕಾಗಿ ಪ್ರೋತ್ಸಾಹವನ್ನಿತ್ತಿತು. ಈ ನಡುವೆ, ದೇಶದಲ್ಲಿ ಕೆಲಸವಿಲ್ಲದೆ ಅಲೆಯುತ್ತಿದ್ದ ಪುಂಡರು ನೂರ್ತು ದೊಡ್ಡ ಹಡಗುಗಳನ್ನು ಕಟ್ಟಿಕೊಂಡು ನೆರೆಹೊರೆಯ ಪ್ರಾಂತ್ಯಗಳ ವ್ಯಾಪಾರದ ಹಡಗುಗಳನ್ನು ಲೂಟಿ ಮಾಡತೊಡಗಿದರು. ಈ ದೇಶದ ಚರಿತ್ರೆಯಲ್ಲಿ ಈ ಪುಂಡರ ಹಾವಳಿಯ ಇತಿಹಾಸವು ಪ್ರಸಿದ್ಧವಿದೆ. ಇಲ್ಲಿದಕ್ಕೆ " Wako " ಎಂಬ ಹೆಸರಿದೆ. ಸರಕಾರದ ಹಡಗುಗಳು ರಭಸದಿಂದ ನಿರ್ಮಾಣವಾದವು. ಲೂಟಿಗಾರರ ಸದ್ದು ಅಡಗಿತು. ಚೀನಾ, ಕೋರಿಯಾಗಳ ತೀರದ ರಕ್ಷಣೆಯು ಭದ್ರವಾಯಿತು. ಸರಕಾರವು ಉಗ್ರೋಪಾಯಗಳಿಂದ ಎಲ್ಲವನ್ನೂ ಶಾಂತಗೊಳಿಸಿತು. ೧೬ನೆಯ ಶತಮಾನದಲ್ಲಿ, ಸರ್ವಾಧಿಕಾರಿಯಾದ ತೊಯೋತೇಮಿಯು ದೊಡ್ಡ ಹಡಗುಪಡೆಯೊಂದಿಗೆ ಕೋರಿಯಾ ದೇಶಕ್ಕೆ ಮುತ್ತಿಗೆ ಹಾಕಿದನು. ಪ್ರಾರಂಭದಲ್ಲಿ ಭೂಸೈನಿಕರು ಜಯವನ್ನು ಸಂಪಾದಿಸಿದರು. ಸರ್ವಾಧಿಕಾರಿಯು

ಮರಣಹೊಂದಿದನು. ಹೆಚ್ಚಿನ ಜಯಸಂಪಾದನೆಯಿಲ್ಲದೆ ಅವನ ಸೈನ್ಯವು ಮರಳಬೇಕಾಯಿತು.

೧೭ನೆಯ ಶತಮಾನದಲ್ಲಿ ಬಿಳಿ ಜನಾಂಗಗಳು ಜಪಾನಿನೊಡನೆ ಬೇಕಾದಷ್ಟು ವ್ಯಾಪಾರವನ್ನು ಮಾಡುತ್ತಲಿದ್ದವು. ಆದರೆ ಇವರು ವ್ಯಾಪಾರವನ್ನಷ್ಟೆ ಮಾಡದೆ ರಾಜಕಾರಣದಲ್ಲಿ ಕೈಹಾಕಿದ್ದರಿಂದ, ಸರಕಾರದ ಸರ್ವಾಧಿಕಾರಿಯು ಪರದೇಶದ ಹಡಗುಗಳು ತಮ್ಮ ಪ್ರದೇಶದಲ್ಲಿ ಕಾಲಿಡಕೂಡದೆಂದು ಕಟ್ಟಪ್ಪಣೆಯನ್ನು ಮಾಡಿದನು. ಈ ಘೋರ ಶಾಸನದ ಮೂಲಕ ೨॥ ಶತಮಾನಗಳ ವರೆಗೆ ಡಚ್ಚರ ಹೊರತು ಉಳಿದ ಯಾವ ಪಾಶ್ಚಿಮಾತ್ಯರು ಈ ದ್ವೀಪಕ್ಕೆ ಸುಳಿದಾಡಲಿಲ್ಲ. ಡಚ್ಚರಿಗಾದರೂ ಕ್ರೂರ ಶಾಸನಗಳಿದ್ದರೂ, ಅವೆಲ್ಲವುಗಳನ್ನು ಸಹಿಸಿಕೊಂಡು ವ್ಯಾಪಾರವನ್ನು ಮಾಡುತ್ತಿದ್ದರು. ಜಪಾನಿಯ ವರ್ತಕರಿಗೂ ಕೂಡ ಆಳವಾದ ಸಮುದ್ರದ ವರೆಗೆ ಹೋಗಲು ಅಪ್ಪಣೆ ದೊರೆಯದ್ದರಿಂದ ದೊಡ್ಡ ಹಡಗುಗಳನ್ನು ಕಟ್ಟುವ ಉದ್ಯೋಗವೇ ನಿಲ್ಲಿಸಲ್ಪಟ್ಟಂತಾಯಿತು.

೫೦೦ ತೋಕು (ಸುಮಾರು ೫೦ ಟನ್) ಭಾರ ಮೀರುವಂಥ ಹಡಗುಗಳನ್ನು ಕಟ್ಟುವ ಉದ್ಯೋಗವು ನಿಂತಿತು. ಇದರಿಂದ ದೇಶರಕ್ಷಣೆಗಾಗಿ ದೊಡ್ಡ ಹಡಗುಗಳು ಇಲ್ಲದಂತಾಯಿತು. ಪರದೇಶದವರ ಸಂಪರ್ಕವಿಲ್ಲದ್ದರಿಂದ ಜಪಾನಿಯರು ಕೂಪಮಂಡೂಕವೃತ್ತಿಯವರಾದರು. ಆದುದರಿಂದಲೆ ಏಶಿಯಾಖಂಡಕ್ಕೆ ಹತ್ತಿರವಿರುವ ಆಸ್ಟ್ರೇಲಿಯಾ, ದಕ್ಷಿಣದ್ವೀಪ ಮೊದಲಾದವುಗಳು ಬಿಳಿ ಜನಾಂಗಗಳಿಗೆ ತುತ್ತಾಗಲು ಕಾರಣವಾಯಿತು. ಒಂದು ವೇಳೆ ಜಪಾನಿಯರು ೨॥ ಶತಮಾನಗಳ ವರೆಗೆ ಏಕಾಂತವಾಸವನ್ನು ಬಿಟ್ಟು, ಮುಂದೆ ನುಗ್ಗಿದ್ದರೆ ಆಸ್ಟ್ರೇಲಿಯಾ ಮೊದಲಾದವುಗಳು ಇವರ ವಶವಾಗಿ ಆ ದೇಶಗಳ ಚರಿತ್ರೆಯೇ ಬೇರೆ ತರದ್ದಾಗುತ್ತಿತ್ತು. ಆದರೆ ಇತ್ತ ಪಾಶ್ಚಿಮಾತ್ಯ ದೇಶಗಳಲ್ಲಿ ಯಾಂತ್ರಿಕ ಶೋಧನೆಗಳಿಂದ ನವೀನ ಸುಧಾರಣೆಗಳು ನಾಗಾಲೋಟದಿಂದ ಬೆಳೆಯಲಾರಂಭಿಸಿ, ಇಂಗ್ಲಿಷ, ಫ್ರೆಂಚ, ರಶಿಯನ್ನರ ಯುದ್ಧದ ಹಡಗುಗಳು ಜಪಾನಿಗೆ ಮೆಲ್ಲಗೆ ಹಣಿಕೆಹಾಕತೊಡಗಿದವು.

೧೮೫೩ರಲ್ಲಿ ಜಪಾನದಿಂದ ವ್ಯಾಪಾರಕ್ಕೆ ಅನುಮತಿಯನ್ನು ಪಡೆಯುವ

ದಕ್ಕೆ ಅಮೇರಿಕೆಯ ನಾಯಕನಾದ ಪೇರಿಯು ನಾಲ್ಕು ಕರಿಯ ಬಣ್ಣದ ಯುದ್ಧದ ಹಡಗುಗಳ ಸಹಿತವಾಗಿ ಟೋಕಿಯೋ ತೀರದಲ್ಲಿ ಬೀಡುಬಿಟ್ಟನು. ಜಪಾನಿಯರು ಈ ವರೆಗೆ ನೋಡದಿರುವ ಈ ಕಬ್ಬಿಣದ ಹಡಗುಗಳನ್ನು ಕಂಡು ಬೆರಗಾದರು. ಅಮೇರಿಕೆಯ ಈ ಬಿನ್ನಹವನ್ನು ಮಾನ್ಯಮಾಡ ಬೇಕೋ ಬೇಡವೋ ಎಂಬ ಬಗ್ಗೆ ದೇಶದಲ್ಲಿ ಭಿನ್ನಾಭಿಪ್ರಾಯವುಂಟಾಯಿತು. ಅಮೇರಿಕೆಯ ಈ ಕಬ್ಬಿಣದ ಹಡಗುಗಳೊಡನೆ ಯುದ್ಧಮಾಡಿದರೆ ತಮಗೆ ಜಯವು ದೊರಕದೆಂದೂ, ಏಕಾಂತವಾಸವನ್ನು ಮುಕ್ತಗೊಳಿಸಿದರೆ, ಪರ ಕೀಯ ನಾಗರಿಕತೆಯು ದೇಶದ ತುಂಬೆಲ್ಲ ಹಬ್ಬಿ, ದೇಶದ ಸ್ವಾತಂತ್ರ್ಯವು ನಷ್ಟವಾಗುವದೆಂದೂ ಎರಡು ಪಂಗಡಗಳಾದವು. ಆದರೂ ಅಮೇರಿಕೆ ಯೊಡನೆ ಯುದ್ಧಮಾಡುವ ಅಭಿಪ್ರಾಯವೇ ಪ್ರಬಲವಾದುದರಿಂದ ಹಾಗೆ ನಿರ್ಧರಿಸಲ್ಪಟ್ಟಿತು. ಈ ಸಮಯುವನ್ನು ಸಾಧಿಸಿ ಹಾಲಂಡದ ರಾಜನು ಜಪಾನದ ಸರ್ವಾಧಿಕಾರಿಗೆ ಪತ್ರವನ್ನು ಬರೆದು, ಒಂದುವೇಳೆ ವ್ಯಾಪಾರಕ್ಕಾಗಿ ದೇಶದ ಬಾಗಿಲವನ್ನು ತೆರೆಯದಿದ್ದರೆ, ಚೀನಾ ದೇಶದಲ್ಲಿ ಅಫೀಮಿನ ವ್ಯಾಪಾರಕ್ಕಾಗಿ ಇಂಗ್ಲಿಷರು ಕೈಕೊಂಡ ಕಾರ್ಯಗಳನ್ನೇ ಕೈಕೊಳ್ಳಲಾಗುವ ದೆಂದು ಬೆದರಿಸಿದನು. ಇಂಥ ವಿಷಮ ಪರಿಸ್ಥಿತಿಯನ್ನು ತೂಗಿ ನೋಡಿ ತೋಕುಗಾವದ ಸರ್ವಾಧಿಕಾರಿಯು ೧೮೫೪ರಲ್ಲಿ ಪರದೇಶಗಳಿಗೆ ಜಪಾನಿನೊ ಡನೆ ವ್ಯಾಪಾರ ಮಾಡಲು ಅನುಮತಿಯನ್ನು ಕೊಟ್ಟುಬಿಟ್ಟನು. ಹೀಗೆ ಮಣಿಯುವಂಥ ಪರಿಸ್ಥಿತಿಯು ಬಂದುದರಿಂದ ತಕ್ಕ ಉಪಾಯಗಳನ್ನು ಯೋಜಿಸಿ ಸಜ್ಜಾಗಿರಬೇಕೆಂದು ಬಗೆದು ಅಂದಿನಿಂದ ಯುದ್ಧದ ಹಡಗು ಗಳನ್ನು ಕಟ್ಟಲು ಪ್ರೋತ್ಸಾಹವು ದೊರೆಯಿತು. ಜಪಾನವು ೧೮೫೬ರಲ್ಲಿ ಡಚ್ಚರಿಂದ ಎರಡು ಯುದ್ಧದ ಹಡಗುಗಳನ್ನು ಕೊಂಡುಕೊಂಡದ್ದಲ್ಲದೆ, ಅನೇಕ ಹಡಗುಗಳ ಕಟ್ಟುವಿಕೆಗೆ ಇಂಗ್ಲಂಡ, ಅಮೇರಿಕಾ, ಫ್ರಾನ್ಸ ದೇಶ ಗಳಿಗೆ ಸಾಕಷ್ಟು ಹಣವನ್ನು ಕಳುಹಿಸಿತು. ಇದೇ ಕಾಲಕ್ಕೆ ವ್ಹಿಕ್ಟೋರಿಯಾ ರಾಣಿಯು ಜಪಾನಿಗೆ 'ಚಕ್ರವರ್ತಿ' ಎಂಬ ಯುದ್ಧದ ಹಡಗವೊಂದನ್ನು ಬಹುಮಾನವಾಗಿ ಅರ್ಪಿಸಿದಳು.

ಜಪಾನವು ಈ ರೀತಿಯಾಗಿ ಉಗಿಹಡಗುಗಳ ಸಹಾಯದಿಂದ ತನ್ನ ತೀರ ಪ್ರದೇಶ ರಕ್ಷಣೆಯ ಕಡೆಗೆ ಹೆಚ್ಚು ಗಮನವನ್ನು ಕೊಡಲಾರಂಭಿಸಿತು.

ಪರಕೀಯರ ಮೇಲೆ ದಾಳಿಯಿಡಬೇಕೆಂಬವರನ್ನು ಸಮಾಧಾನಗೊಳಿಸಿ, ದೇಶದ ಭದ್ರತೆಗಾಗಿ, ಶಕ್ತಿ-ಸರ್ವಸ್ವವನ್ನೆಲ್ಲ ಉಪಯೋಗಿಸಬೇಕೆಂದು ಸರಕಾರವು ಬಯಸಿತು. ತೀರದ ಬ್ಯಾಟರಿಗಳ ನಿರ್ಮಾಣಕ್ಕೆ ಇಂಗ್ಲಿಷರ ಸಹಕಾರವನ್ನು ಪಡೆಯಿತು. ತೀರವನ್ನು ಅಳೆಯಲು ಬಂದ ಅಮೇರಿಕೆಯವರಿಗೆ ಮನ್ನಣೆಯನ್ನು ಕೊಡಲಾಯಿತು. ಹಡಗುಪಡೆಯ ಶಾಲೆಯಲ್ಲಿ ಇಂಗ್ಲಿಷ, ಡಚ್ಚ ಶಿಕ್ಷಕರು ನಿಯಮಿಸಲ್ಪಟ್ಟರು. ಹಣವುಳ್ಳವರು ದೇಶ ಕಲ್ಯಾಣಕ್ಕಾಗಿ ತಕ್ಕ ನೆರವನ್ನು ಕೊಡಲಾರಂಭಿಸಿದರು. ಹೀಗಾಗಿ ಹಡಗು ಪಡೆಯ ಸಿದ್ಧತೆಯು ಭರದಿಂದ ಸಾಗಿತು. ಇದಲ್ಲದೆ ಇನ್ನೂ ಅನೇಕಾನೇಕ ಕಾರ್ಯಗಳು ಸ್ವೀಕರಿಸಲ್ಪಟ್ಟವು.

ಜಲಸೈನ್ಯದ ಶಾಲೆಯಲ್ಲಿ ವಿದ್ಯೆಯನ್ನು ಕಲಿತ ಮೇಲೆ, ೧೮೬೦ರಲ್ಲಿ ಜಪಾನಿಯರ ಒಂದು ಯುದ್ಧದ ಹಡಗು ತಯಾರಿಸಲ್ಪಟ್ಟು ೩೭ದಿನ ಪ್ರಯಾಣ ಮಾಡಿ ಅಮೇರಿಕೆಯ "ಸಾನ್ ಫ್ರಾನ್ಸಿಸ್ಕೊ" ಪಟ್ಟಣಕ್ಕೆ ತಲುಪಿತು. ಎಂಟೇ ಎಂಟು ವರುಷಗಳಲ್ಲಾದ ಇವರ ಪ್ರಗತಿಯನ್ನು ಕಂಡು ಅಮೇರಿಕೆಯವರು ವಿಸ್ಮಯಗೊಂಡರಲ್ಲದೆ ೨೫ ಸಾವಿರ ಡಾಲರುಗಳನ್ನು ಬಹುಮಾನವಾಗಿ ಕೊಟ್ಟು ಒಂದು ತಿಂಗಳ ವರೆಗೆ ಈ ನಾವಿಕರನ್ನು ನಾನಾವಿಧವಾಗಿ ಉಪಚರಿಸಿದರು.

೧೮೫೪ರಲ್ಲಿ ಸರ್ವಾಧಿಕಾರಿಯು ಅಮೇರಿಕೆಯೊಡನೆ ಮಾಡಿಕೊಂಡ ವ್ಯಾಪಾರದ ಕರಾರುಗಳ ದೆಶೆಯಿಂದ ಅನೇಕ ಪಾಳೆಯಗಾರರು ಸರ್ವಾಧಿಕಾರಿಗೆ ವೈರಿಗಳಾದರು. ಬಿಳಿ ಜನಾಂಗದವರು ಅನಾಗರಿಕರು, ಸ್ವಾತಂತ್ರ್ಯವನ್ನಪಹರಣ ಮಾಡುವವರು ಎಂಬ ಕಾರಣದಿಂದ ಪಾಳೆಯಗಾರರು ಸರ್ವಾಧಿಕಾರಿಯು ಕೊಟ್ಟ ಅನುಮತಿಯನ್ನು ವಿರೋಧಿಸಿದರು. ಇಲ್ಲಿಯ ಜನರು ಇಂದಿಗೂ ಬಿಳಿ ಜನಾಂಗದವರು ಕಾಡುಜನರೆಂತಲೂ ಅವರೊಡನೆ ಸಂಪರ್ಕವನ್ನಿಡುವದು ವಿಹಿತವಲ್ಲವೆಂದೂ ಭಾವಿಸುತ್ತಾರೆ. ಇಂಥ ಸ್ಥಿತಿಯಲ್ಲಿ ಪರಕೀಯರ ವಿಷಯಕ್ಕೆ ಒಳ್ಳೇ ಅಭಿಪ್ರಾಯವನ್ನುಂಟುಮಾಡುವದು ಬಿಕ್ಕಟ್ಟಿನ ಮಾತಾಗಿರುವದು. ೧೮೬೨ರಲ್ಲಿ ನಾಲ್ಕು ಜನ ಇಂಗ್ಲಿಷರು ಅಶ್ವಾರೂಢರಾಗಿ ಹೋಗುತ್ತಿರುವಾಗ ಎದುರಿಗೆ ಬರುತ್ತಿದ್ದ ಸತ್ಸುಮ

ಪಾಳೆಯಗಾರನಿಗೆ ತಕ್ಕ ಮರ್ಯಾದೆಯನ್ನು ಮಾಡಲಿಲ್ಲೆಂಬ ಕಾರಣದಿಂದ ಪಾಳೆಯಗಾರರ ಕಡೆಯವರು ಅವರನ್ನು ಕತ್ತರಿಸಿ ಕೆಡವಿದರು. ಇಂಗ್ಲಿಷರು ಇದನ್ನು ಕೇಳಿ ಕೆರಳಿ ೭ ಹಡಗುಗಳೊಡನೆ ಪಾಳೆಯಗಾರನ ಮೇಲೆ ದಾಳಿ ಯಿಕ್ಕಿಅವನ ಮೂರು ಹಡಗುಗಳನ್ನು ಮುಳುಗಿಸಿದ್ದಲ್ಲದೆ " ಕೋಷಿಮ್ಮ ' ಎಂಬ ಪಟ್ಟಣವನ್ನು ತೋಪುಗಳಿಂದ ಸುಟ್ಟುಬಿಟ್ಟರು.

೧೮೬೪ ರಲ್ಲಿ " ಚೇಸು " ಪಾಳೆಯಗಾರನು ಬಿಳಿಜನಾಂಗದವರ ಹಡಗುಗಳ ಮೇಲೆ ಗುಂಡಿನ ಮಳೆಯನ್ನು ಸುರಿಸಿದ್ದಕ್ಕಾಗಿ, ಬ್ರಿಟಿಶ್ ಫ್ರಾನ್ಸ, ಅಮೇರಿಕಾ, ಡಚ್ಚ ಹಡಗುಗಳು ಅವನ ಮೇಲೆ ಯುದ್ಧಮಾಡಿ ಜಯವನ್ನು ಸಂಪಾದಿಸಿದವು. ತೋಕುಗಾವದ ಸರ್ವಾಧಿಕಾರಿಯು ಅವರ ಹಡಗುಗಳ ಹಾನಿಯನ್ನು ತುಂಬಿಕೊಡಲು ೧ ಕೋಟಿ ಎನ್ನುಗಳ ಕಪ್ಪ ಕಾಣಿಕೆಯನ್ನು ಒಪ್ಪಿಸಬೇಕಾಯಿತು. ಹೀಗೆ ೨॥ ಶತಮಾನಗಳ ವರೆಗೆ ರಾಜ್ಯಭಾರಮಾಡಿದ ಸರ್ವಾಧಿಕಾರಿಗಳ ಆಡಳಿತೆಯು ತಪ್ಪಿ, ೧೮೬೮ ರಲ್ಲಿ ಹಕ್ಕುದಾರರಾದ ಚಕ್ರವರ್ತಿಗಳ ಕೈಸೇರಿತು. ಚಕ್ರವರ್ತಿಗಳ ಸರಕಾರವು ಪಾಳೆಗಾರರ ಸ್ವಾಧೀನದಲ್ಲಿದ್ದ ಯುದ್ಧದ ಹಡಗುಗಳನ್ನೆಲ್ಲ ತರಿಸಿ, ಒಂದು ಜಲಸೈನ್ಯ ಖಾತೆಯನ್ನೇರ್ಪಡಿಸಿ ಅವುಗಳನ್ನು ಈ ಖಾತೆಯ ವಶದಲ್ಲಿಡಲಾ ಯಿತು. ಹೊಸ ಯುದ್ಧದ ಹಡಗುಗಳು ಕಟ್ಟಲ್ಪಟ್ಟವು. ೧೮೮೩ ರಲ್ಲಿ ಜಪಾನಿಯರು ತಕ್ಕಷ್ಟು ಶಿಕ್ಷಣವನ್ನು ಪಡೆದು, ನಿಪುಣರಾದುದರಿಂದ ಪರ ದೇಶದ ಶಿಕ್ಷಕರನ್ನು ಅವರವರ ದೇಶಗಳಿಗೆ ತಿರುಗಿ ಕಳಿಸಲ್ಪಟ್ಟರು.

೧೮೯೪ ರಲ್ಲಿ ಕೋರಿಯಾ ದೇಶದ ಸಲುವಾಗಿ ಚೀನಾ-ಜಪಾನ ಯುದ್ಧ ವಾಗುವ ಸಮಯವೊದಗಿತು. ಈ ವೇಳೆಗೆ ಚೀನಾದಲ್ಲಿ ೮೪ ಸಾವಿರ ಟನ್ನ ತೂಕದ ೬೫ ಯುದ್ಧದ ಹಡಗಗಳು, ೨೪ ಟಾರ್ಪೆಡೋಗಳು ಸಿದ್ಧ ವಿದ್ದವು. ಜಪಾನದಲ್ಲಾದರೂ ೬೧ ಸಾವಿರ ಟನ್ನುಗಳ ೨೧ ಯುದ್ಧದ ಹಡ ಗುಗಳು, ೨೪ ಟಾರ್ಪೆಡೋಗಳಿದ್ದವು. ಯುದ್ಧವು ೮ ತಿಂಗಳು ನಡೆದು ಜಪಾನಿಯರು ಜಯಶೀಲರಾದರು. ಆಗ ಚೀನಿಯರ ೧೬ ಸಾವಿರ ಟನ್ನು ಭಾರವುಳ್ಳ ಹಡಗುಗಳು ಜಪಾನಿಯರ ವಶವಾದುದರಿಂದ ಇವರ ಜಲಸೈನ್ಯವು ಮತ್ತಿಷ್ಟು ಬಲಶಾಲಿಯಾಯಿತು. ಪರಕೀಯರ ಸಹಾಯವಿಲ್ಲದೆ ಜಪಾನವು

ಈ ಯುದ್ಧವನ್ನು ಗೆದ್ದ ಸಂಗತಿಯು ಅನೇಕರಿಗೆ ಆಶ್ಚರ್ಯವನ್ನುಂಟು ಮಾಡಿತು. ಹೀಗೆ ಏಶಿಯಾ ಖಂಡದ ದೊಡ್ಡ ರಾಜ್ಯವಾದ ಚೀನಾದೇಶವು ಚಿಕ್ಕರಾಜ್ಯವಾದ ಜಪಾನಿಗೆ ಸೋತುದರಿಂದ ಜಪಾನಿಯರ ದೃಷ್ಟಿಯು ಭೂಖಂಡದ ಮೇಲೆ ಹರಡಲು ಕಾರಣವಾಯಿತು. ಅದೇ ಕಾರಣದಿಂದಲೇ ಇಂದಿನ ಯುದ್ಧವು ಇಷ್ಟು ಗಂಭೀರ ಸ್ವರೂಪವನ್ನು ತಾಳಿರುವದು. ಇದೇ ಕಾಲಕ್ಕೆ ರಶಿಯಾ, ಜರ್ಮನಿ, ಫ್ರಾನ್ಸ ದೇಶಗಳು ಚೀನಾದೇಶವನ್ನು ನುಗ್ಗಿ ಅನೇಕ ಪ್ರಾಂತಗಳನ್ನು ಸ್ವಾಧೀನಪಡಿಸಿಕೊಂಡವು. ಇದಲ್ಲದೆ ಜಪಾನವು ವಶಪಡಿಸಿಕೊಂಡಿದ್ದ "ಲಯಟಾಂಗ ಆಧಿಪತ್ಯ" ವನ್ನು ಚೀನಿಯರಿಗೆ ಮರಳಿ ಕೊಡಬೇಕೆಂದು ಒತ್ತಾಯ ಪಡಿಸಿದವು. ಜಪಾನವು ಅರ್ಧಭಾಗ ವನ್ನು ಮಾತ್ರಕೊಟ್ಟಿತು. ಪರಕೀಯರು ಒತ್ತಾಯ ಮಾಡಿದುದರ ಅರ್ಥದ ಮರ್ಮವನ್ನರಿತುಕೊಂಡು, ಜಪಾನವು ತನ್ನ ಶಕ್ತಿಯನ್ನು ಇನ್ನೂ ವೃದ್ಧಿ ಪಡಿಸಲು ನಾನಾ ವಿಧಗಳಿಂದ ಪ್ರಯತ್ನ ನಡಿಸಿತು.

೧೯೦೪ ರ ವೇಳೆಗೆ ರಶಿಯಾ ದೇಶವು ತನ್ನ ಚಕ್ರಾಧಿಪತ್ಯವನ್ನು ವಿಸ್ತಾರಗೊಳಿಸುತ್ತಿದ್ದುದನ್ನು ಕಂಡು ಜಪಾನವು ವಿಹ್ವಲಗೊಂಡಿತು. ರಶಿಯನ್ನರು ದಕ್ಷಿಣ ಮಂಚೂರಿಯಾದಲ್ಲಿ ಲೋಹಮಾರ್ಗವನ್ನು ಆರಂಭಿ ಸಿದ್ದಲ್ಲದೆ ಕೋರಿಯಾ ದೇಶದ ರಾಜ್ಯದಾಡಳಿತೆಯಲ್ಲಿ ಕೈಹಾಕತೊಡಗಿದರು. ಅದರಿಂದ ರಶಿಯಾ-ಜಪಾನದ ಯುದ್ಧವು ತಲೆದೋರಿತು. ಜಪಾನಿಯರು ತಮ್ಮ ೨|| ಲಕ್ಷ ಟನ್ನು ಯುದ್ಧದ ಹಡಗುಗಳಿಂದಲೂ, ರಶಿಯಾದವರು ೨ ಲಕ್ಷ ಟನ್ನು ಯುದ್ಧದ ಹಡಗಗಳಿಂದಲೂ ಯುದ್ಧವನ್ನು ಹೂಡಿದರೂ ಯುದ್ಧವು ೧೮ ತಿಂಗಳುಗಳ ವರೆಗೆ ನಡೆದು ಜಪಾನಿಯರು ಕೊನೆಗೆ ಗೆದ್ದರು. ಈ ಯುದ್ಧದಲ್ಲಿ ದೊರೆತ ರಶಿಯನ್ನರ ಹಡಗುಗಳ ಸಂಖ್ಯೆಯಿಂದ ಶಾಂತಿ ಸಾಗರದಲ್ಲಿ ಜಪಾನಿಯರ ಜಲಸೇನೆಗೆ ಪ್ರಥಮಸ್ಥಾನವು ದೊರೆಯಿತು. ಈ ಉಚ್ಚತರಗತಿಯನ್ನು ಕಂಡು ಅಮೇರಿಕೆಯು ಸೈರಿಸಲಾರದೆ, ಸ್ನೇಹಭಾವ ವನ್ನು ಬಿಟ್ಟು, ಒಂದು ತರಹದ ಕಠಿಣ ಧೋರಣವನ್ನು ಸ್ವೀಕರಿಸಿತು. ೬ ಸಾವಿರ ಮೈಲು ದೂರವಿರುವ ಅಮೇರಿಕೆಯನ್ನು ಆಕ್ರಮಿಸುವ ಯೋಚನೆ ಯಿಲ್ಲದೆ ಜಪಾನವು ಸುಮ್ಮನಿದ್ದು ಬಿಟ್ಟಿತು. ಆದರೆ ಅಮೇರಿಕೆಯು ಶಾಂತಿ ಸಾಗರದಲ್ಲಿ ಭದ್ರವಾದ ಜಲಸೇನೆಯನ್ನು ಕಟ್ಟುವುದಕ್ಕೆ ಆರಂಭಿಸಿತು.

ಇಂದಿಗೂ ಅಮೇರಿಕಾ, ಜಪಾನಿನ ಜಲಸೇನೆಯು ಪೈಪೋಟಿಯಿಂದ ಬೆಳೆಯುತ್ತಲಿದೆ. ಸದ್ಯಕ್ಕೆ ಜಪಾನಿನ ಜಲಸೇನೆಯ ಬಲವು ತಮ್ಮ ದೇಶದ ಮೇಲೇರಿ ಬರುವಂಥ ಯಾವುದೇದೇಶದ ಶತ್ರುಗಳನ್ನಾದರೂ ತಡೆಗಟ್ಟುವಷ್ಟು ಸದಾ ಸಿದ್ಧವಿರುತ್ತದೆ. ಜಪಾನಿಯರು ಏಶಿಯಾ ಖಂಡದಿಂದ ಪರಕೀಯರ ಉಚ್ಚಾಟನೆ ಮಾಡಬೇಕೆಂಬ ಧ್ಯೇಯವನ್ನಿಟ್ಟುಕೊಂಡು ಆ ರೀತಿಯ ಹವಣಿಕೆಯಲ್ಲಿದ್ದಾರೆಂದು ಕಲ್ಪಿಸಿದರೆ ತಪ್ಪಾಗಲಾರದು.

೧೯೨೨ ರಲ್ಲಿ ಇಂಗ್ಲಂಡ, ಅಮೇರಿಕೆಗಳು ಜಪಾನಿನೊಡನೆ ಹೊಸದಾಗಿ ಯುದ್ಧದಹಡಗಗಳನ್ನು ಕಟ್ಟಕೂಡದೆಂದು ಒಪ್ಪಂದಮಾಡಿಕೊಂಡವು. ವಾಸಿಂಗ್‌ಟನ್ನದಲ್ಲಿ ಸೇರಿದ ಸಮ್ಮೇಳನದಲ್ಲಿ ಹಡಗುಗಳ ಸಂಖ್ಯೆಯಲ್ಲಿ ಅಮೇರಿಕಾ, ಇಂಗ್ಲಂಡ ಮೊದಲನೆಯ ತರಗತಿಯವುಗಳಾಗಿರಬೇಕೆಂತಲೂ, ಜಪಾನ, ಫ್ರಾನ್ಸ, ಇಟಲಿಗಳು ಎರಡನೆಯ ತರಗತಿಯವಾ.ಗಿರಬೇಕೆಂತಲೂ ನಿರ್ಧರಿಸಲ್ಪಟ್ಟಿತು. ( ೫: ೫: ೩: ) ಈ ಒಪ್ಪಂದದಿಂದ ಜನಸೇನೆಯಲ್ಲಿ ಜಪಾನು ೩ ನೆಯ ಸ್ಥಳವನ್ನು ಆಕ್ರಮಿಸಿತು. ಇದರಂತೆಯೆ ೧೯೩೦ ರಲ್ಲಿ ನಡೆದ ಲಂಡನ್ನ ಸಮ್ಮೇಳನದಲ್ಲಿ ಯಾವ ಬದಲಾವಣೆಗಳುಂಟಾಗಲಿಲ್ಲ. ೧೯೩೫ ರಲ್ಲಿ ಲಂಡನ್ನ ಸಮ್ಮೇಳನದ ಕಾಲಕ್ಕೆ ಜಪಾನವು ಜಲಸೇನೆಯಲ್ಲಿ ಸರಿಸಮಾನತ್ವವನ್ನು ಪಡೆಯುವದಕ್ಕಾಗಿ ಹಟಹಿಡಿಯಿತು. ಆದರೆ ಹಟವು ಸಾಧಿಸದೆ ಹೋದ್ದರಿಂದ, ಸಮ್ಮೇಳನವನ್ನು ತ್ಯಜಿಸಿ ಇಂದು ತಕ್ಕಷ್ಟು ಹಡಗುಗಳನ್ನು ಕಟ್ಟಿಕೊಂಡು ಇಂಗ್ಲಂಡಿನ ಸರಿ ಸಮಾನ ಸ್ಥಾನನವನ್ನು ವಹಿಸಿಕೊಂಡಿರುತ್ತದೆ.

ಇತ್ತೀಚೆಗೆ ಜಪಾನಿಯರು ಒಬ್ಬನೇ ಒಬ್ಬನು ನಡೆಯಿಸಿಕೊಂಡು ಹೋಗುವ ಒಂದು ತರಹದ "ತರುಬಿತರು" ಎಂಬ ಹಡಗವನ್ನು ಕಂಡು ಹಿಡಿದಿದ್ದಾರೆಂಬ ವಾರ್ತೆಯಿದೆ. ಇದರಿಂದ ಹೆಚ್ಚು ಶ್ರಮವಿಲ್ಲದೆ ಎಂಥ ದೊಡ್ಡ ಹಡಗವನ್ನಾದರೂ ಅದು ಮುಳುಗಿಸುವಷ್ಟು ಶಕ್ತಿಯುತವಾಗಿದೆಯೆಂದು ಹೇಳುತ್ತಾರೆ. ಇಂದು ಜಪಾನವು ಸರಾಸರಿಯಾಗಿ ೬೦ ಕೋಟಿ ಎನ್ನುಗಳನ್ನು ಖರ್ಚುಮಾಡುತ್ತಲಿದೆ. ಆದರೆ ಸದ್ಯಕ್ಕೆ ಸಾಗಿರುವ ಯುದ್ಧದ ಸಲುವಾಗಿ ಎಷ್ಟು ವೆಚ್ಚಮಾಡುತ್ತಿದ್ದಾರೆಂಬ ಸಂಗತಿಯು ಇನ್ನೂ ಗೂಢವಾಗಿಯೇ ಇದೆ.

ಜಪಾನಿಯರ ಸ್ವಾತಂತ್ರ್ಯವು ಅವರ ಜಲಸೇನೆಯ ಮೇಲೆಯೇ ಅವಲಂಬಿಸಿರುತ್ತದೆ. ಇಂದು ಪರಕೀಯರು ಜಪಾನವನ್ನು ಕಂಡು ಭಯಪಡುವುದಾದರೂ ಈ ಜಲಸೇನೆಯ ಅದ್ಭುತ ಶಕ್ತಿಯ ಪ್ರದರ್ಶನದಿಂದಲೇ ಎಂದು ಧೈರ್ಯದಿಂದ ಹೇಳಬಹುದು. ಇಂದಿನ ನವಯುಗದಲ್ಲಿ ಸಾವಿರಾರು ಮೈಲುಗಳ ದೂರದಿಂದ ಬಂದು ಮನೆಯ ಹತ್ತಿರ ಭದ್ರವಾಗಿ ಕುಳಿತಿರುವ ಜಪಾನಿಯರನ್ನು ಸೋಲಿಸುವ ಮಾತು ಕನಸಿನ ಕನವರಿಕೆಯಾಗಿದೆ. ಇದರ ಪರಿಣಾಮವಾಗಿಯೇ ಇವರು ಚೀನಾದೇಶದಲ್ಲಿ ಹಾಕುತ್ತಿರುವ ತಾಂಡವ ನೃತ್ಯಕ್ಕೆ ಯಾರೂ ಅಡ್ಡಬಾರದಿರುವುದು. ಯುದ್ಧಮಾಡಲು ಹಿಂಜರಿಯುತ್ತಿರುವ ಪಾಶ್ಚಿಮಾತ್ಯರು ಜಪಾನಿಯರನ್ನು ಜಗ್ಗಿಸುವದಕ್ಕೆ ಎಂದಿಗೂ ಮನಸ್ಸುಮಾಡುವದಿಲ್ಲ. ಇಂಗ್ಲಿಷರು ಕೂಡ ಜಪಾನಿಯರನ್ನು ಎದುರಿಸದೆ, ಅದಷ್ಟು ಮಟ್ಟಿಗೆ ಏಶಿಯಾಖಂಡವನ್ನು ಸೂರೆಮಾಡುವುದಕ್ಕಾಗಿ ಜಪಾನಿಯರ ಸ್ನೇಹಸಂಪಾದನೆಯನ್ನೇ ಮಾಡಿಕೊಳ್ಳುತ್ತಲಿದ್ದಾರೆ. ಇಷ್ಟು ಪ್ರಬಲವಾದ ಈ ಚಿಕ್ಕ ರಾಜ್ಯದ ಕೀರ್ತಿಯು ಅದ್ಭುತವಾಗಿದೆಯೆಂದು ದೃಷ್ಟಾಂತಗಳಿಂದಲೇ ಕಂಡುಬಂದಿದೆ.

## ಹಡಗುಗಳು

ಈ ಕೆಳಗೆ ಕಾಣಿಸಿದ ನಾನಾತರಹದ ಹಡಗುಗಳು ಸನ್ ೧೯೩೬ನೇ ಸಪ್ಟಂಬರ ೩೦ನೆಯ ತಾರೀಖಿನ ವರೆಗೆ ಕಟ್ಟಲ್ಪಟ್ಟಂಥವಿರುತ್ತವೆ.

—The Japan year book 1937

| ವಿವಿಧ ಹಡಗುಗಳು | ಸಂಖ್ಯೆ | ತೂಕ (ಟನ್ನು) |
|---|---|---|
| Battle ships ಯುದ್ಧದ ಹಡಗುಗಳು | ೯ | ೨೭೨೦೭೦ |
| Training battle ship ಶಿಕ್ಷಣಕೊಡುವ ಯುದ್ಧದ ಹಡಗು | ೧ | ೧೯೫೦೦ |
| 1st class carriers ಪ್ರಥಮ ತರಗತಿಯ ಯುದ್ಧನಾವೆ | ೧೨ | ೧೦೭೪೦೦ |
| 2nd class carriers ೨ನೆ ತರಗತಿಯ ಯುದ್ಧನಾವೆ | ೨೫ | ೧೦೭೩೫೫ |
| Aireraff carriers | ೬ | ೬೪೩೭೦ |

| | | |
|---|---|---|
| Seaplane carriers | ೩ | ೩೧೦೦೦ |
| Submarlne tenders ಮುಳುಗಿಕೊಂಡು ಸಂಚರಿಸುವ ಹಡಗು | ೫ | ೩೧೦೧೫ |
| Mine layers | ೬ | ೧೯೬೩೦ |
| Coast defence vessels ತೀರ ರಕ್ಷಣೆಯ ನಾವೆಗಳು | ೭ | ೫೫೪೫೦ |
| Gun boats ತೋಫಿನ ಹಡಗುಗಳು | ೧೧ | ೫೦೪೫ |
| 1st class destroyers ಪ್ರಥಮ ತರಗತಿಯ ವಿಧ್ವಂಸಕಗಳು | ೮೦ | ೯೫೪೭೯ |
| 2nd class destroyers ೨ನೆಯ ತರಗತಿಯ ವಿಧ್ವಂಸಕಗಳು | ೩೦ | ೨೩೩೯೦ |
| 1st class submarines ಪ್ರಥಮ ತರಗತಿಯ ಮುಳುಗಿಕೊಂಡು ಸಂಚರಿಸುವ ಹಡಗುಳು | ೩೭ | ೪೯೧೫೭ |
| 2nd class submarines ೨ನೆಯ ತರಗತಿಯ ಮುಳುಗಿಕೊಂಡು ಸಂಚರಿಸುವ ಹಡಗುಗಳು | ೨೫ | ೨೦೯೨೭ |
| Torpedo boats ನೌಕಾಧ್ವಂಸಕ | ೧೨ | ೨೧೦೮ |
| Mine sweepers | ೧೨ | ೬೬೯೮ |
| Special service ship | ೨೧ | ೨೧೯೯೩೫ |
| ಒಟ್ಟು.... | ೩೦೨ | ೧೧೩೪೯೨೩ |

ಮೇಲಿನ ಸಂಖ್ಯೆಗಳಲ್ಲದೆ ಈ ಮೂರು ವರುಷಗಳಲ್ಲಿ ಇನ್ನೂ ಅದೆಷ್ಟೋ ಹಡಗುಗಳ ಕಟ್ಟುವಿಕೆಯು ನಡೆದಿದೆ. ಎಷ್ಟು ಎಷ್ಟು ತೂಕದವು ಎಂಬದು ಇನ್ನೂ ಗೊತ್ತಾಗಿರುವದಿಲ್ಲ.

# ಚೀನಾ-ಜಪಾನಿಯರ ಯುದ್ಧ



ಏಶಿಯಾಖಂಡದಲ್ಲಿ ಕಳೆದ ೧೫೦ ವರುಷಗಳಲ್ಲಿ ರಕ್ತದ ಕಾಲುವೆಗಳು ಹರಿದಿದ್ದರೆ, ಪಾಶ್ಚಾತ್ಯರು ಪೌರ್ವಾತ್ಯರ ಮೇಲೆ ನಡೆಯಿಸಿದ ಅನ್ಯಾಯವಾದ ಆಕ್ರಮಣದಿಂದಲೇ ಎಂದು ಘಂಟಾಘೋಷವಾಗಿ ಸಾರಬಹುದು. ಹೊಟ್ಟೆಹೊರೆದುಕೊಳ್ಳಲು ಬಂದ ಪಾಶ್ಚಾತ್ಯರು ತಮ್ಮ ಕುಟಿಲ ನೀತಿಯಿಂದ ಪೂರ್ವದೇಶೀಯರಲ್ಲಿಯೇ ಅಂತಃಕಲಹವನ್ನು ಹುಟ್ಟಿಸಿ, ಸ್ವಾರ್ಥವನ್ನು ಸಾಧಿಸಿಕೊಂಡು, ಪೌರ್ವಾತ್ಯರ ಸ್ವಾತಂತ್ರ್ಯವನ್ನು ಹರಣಮಾಡಿ, ಅವರನ್ನು ಗುಲಾಮರನ್ನಾಗಿ ಮಾಡಿದ ನೀತಿವಂತರಿವರು.

ಪೌರ್ವಾತ್ಯರು ನಾಗರೀಕತೆಯ ಶಿಖರವನ್ನು ಮುಟ್ಟಿ ಅದರ ಸವಿಯಾದ ಫಲಗಳನ್ನು ಸವಿವಾಗ ಗವಿಗಳಲ್ಲಿಯೂ, ಕಾಡುಗಳಲ್ಲಿಯೂ ವಾಸಿಸುತ್ತಿದ್ದ—ಕಾಡುಮನುಷ್ಯರಿದ್ದ—ಈ ಪಶ್ಚಿಮದೇಶೀಯರು, ಇಂದು ಪೌರ್ವಾತ್ಯರು ಅನಾಗರಿಕರೆಂದೂ, ರಾಜ್ಯವಾಳಲು ಅಯೋಗ್ಯರೆಂದೂ, ಅವರನ್ನು ಸುಧಾರಿಸುವದಕ್ಕಾಗಿಯೇ ತಮ್ಮ ಅವತಾರವೆಂದೂ, ತಾವು ಇಲ್ಲಿ ರಾಜ್ಯವಾಳುತ್ತಿರುವದು, ಪೌರ್ವಾತ್ಯರ ಉದ್ಧಾರಕ್ಕಾಗಿಯೇ ಎಂದು ಮಂಕುಬೂದಿಯನ್ನು ಕಣ್ಣಲ್ಲಿ ಎರಚಲು ಅಖಂಡವಾಗಿ ಪ್ರಯತ್ನಿಸುತ್ತಿರುವರು.

ಇಂದು ಪಾಶ್ಚಾತ್ಯರ ಈ ಮಂಕುಬೂದಿಗೆ ಬಲಿಬೀಳದೆ, ಅವರ ಉಪಟಳಕ್ಕೆ ಬೆದರದೆ, ಜಗತ್ತಿನಲ್ಲಿ ತಲೆ ಎತ್ತಿಕೊಂಡು ಮೆರೆಯುತ್ತಿರುವವರು ಏಶಿಯಾದಲ್ಲಿ ಯಾರಾದರೂ ಇದ್ದರೆ, ಅವರು ಜಪಾನೀಯರು. ಸಾಕಷ್ಟು ಸಾಧನಗಳೂ ಅವಕಾಶವೂ ಉತ್ತೇಜನವೂ ದೊರೆತರೆ, ಪಾಶ್ಚಾತ್ಯರಿಗಿಂತಲೂ ಯಾವ ರೀತಿಯಲ್ಲಿಯೂ ಪೌರ್ವಾತ್ಯರು ಹಿಂದುಳಿಯರು ಎಂಬುದನ್ನು ಜಪಾನವು ಜಗತ್ತಿಗೇ ತೋರಿಸಿಕೊಟ್ಟಿದೆ. ಕೇವಲ ೬೦ ವರುಷಗಳ ಪರಿಶ್ರಮದಿಂದ ಜಪಾನು ಅನೇಕ ಶತಮಾನಗಳಿಂದ ಗಳಿಸಿದ ಪಾಶ್ಚಾತ್ಯ ನಾಗರಿ

ಕತೆಯಲ್ಲಿ ಮುಂದುವರಿದುದನ್ನು ಕಂಡು ಎಲ್ಲರೂ ಬೆರಗಾಗಿದ್ದಾರೆ. ಜಪಾನವು ಹಿಂದುಳಿದ ದೇಶವೆಂದು ಮೈಮರೆತ ಪಾಶ್ಚಾತ್ಯರು, ಇಂದು ಅದರ ಶಕ್ತಿ ಸಾಮರ್ಥ್ಯಗಳನ್ನು ಕಂಡು ಕಳವಳಗೊಳ್ಳುತ್ತಿದ್ದಾರೆ. ಅವರ ನಾಶಕ್ಕೆ ಎಣಿಕೆಗಳನ್ನು ಹಾಕುತ್ತಿದ್ದಾರೆ. ಇಂಗ್ಲಿಷರು ಏಶಿಯದ ಉಳಿದ ರಾಷ್ಟ್ರಗಳಲ್ಲಿ ನಡೆಯಿಸಿದ ಚೇಷ್ಟೆಗಳನ್ನು ಜಪಾನಿನಲ್ಲಿಯೂ ನಡೆಯಿಸಿದರೆ ಮರು ದಿನವೇ ಕಾರಾಗೃಹವನ್ನು ಸೇರಬೇಕಾಗುವದು. ಅಂಥ ಪರಿಸ್ಥಿತಿಯು ನಿರ್ಮಾಣವಾಗಿದೆ. ಒಂದು ಒಂದೂವರೆ ವರುಷಗಳ ಹಿಂದೆ, ಬ್ರಿಟಿಶ ರಾಯಭಾರಿಯು ಚೀನಾದಲ್ಲಿ ಸಂಚರಿಸುವಾಗ ಜಪಾನಿಗಳ ಗುಂಡಿನೇಟಿಗೆ ತುತ್ತಾಗಿ, ಆಸ್ಪತ್ರೆಯಲ್ಲಿ ಕೆಲವು ತಿಂಗಳುಗಳ ವರೆಗೆ ಬೀಳಬೇಕಾಯಿತು. ಆಗ ಬ್ರಿಟಿಶರು ನಡೆದ ಘಟನೆಗಾಗಿ, ಕ್ಷಮೆ ಬೇಡಬೇಕೆಂದು ಜಪಾನಿಗಳಿಗೆ ತಿಳಿಸಿದರು. ಆದರೆ ಜಪಾನಿಯರು, "ಯುದ್ಧದ ಸಮಯದಲ್ಲಿ ಸಂಚರಿಸಿದ ತಪ್ಪು ರಾಯಭಾರಿಯದಲ್ಲದೆ ಜಪಾನಿಯರದಲ್ಲ"ವೆಂದು ಉತ್ತರ ಕೊಟ್ಟರು. ಆಗ ಜಪಾನಿಯರ ಬದಲು ಬ್ರಿಟಿಶರೇ ತಮ್ಮ ರಾಯಭಾರಿಗೆ, ೫೦೦೦ ಪೌಂಡುಗಳನ್ನು ಬಹುಮಾನವಾಗಿ ಕೊಟ್ಟರು. ಇದೇ ೨೦ ವರ್ಷಗಳ ಪೂರ್ವದಲ್ಲಿ ಕೆಲಸಕ್ಕೆ ಬಾರದ ಒಬ್ಬ ಇಂಗ್ಲಿಷ ಸಿಪಾಯಿಗಾಗಿ ಬ್ರಿಟಿಶರು ಯುದ್ಧಹೂಡಲು ಸಿದ್ಧರಾಗುತ್ತಿದ್ದರು. ಆ ಕಾಲವೇ ಬದಲಾಗಿ ರಾಯಭಾರಿಗೆ ಅಪಮಾನವಾದರೂ ಸುಮ್ಮನೆ ಸಹಿಸುವ ಕಾಲವು ಬರತೊಡಗಿದೆ. ಅತ್ತೆಗೊಂದು ಕಾಲ, ಸೊಸೆಗೊಂದು ಕಾಲವೆಂಬ ಕಾಲಪುರುಷನ ಲೀಲಾಘಟನೆಗಳು ನಡೆದಿವೆ.

ಶಾಂತಿಸಾಗರದಲ್ಲಿ ಶಾಂತತೆಗೆ ಪ್ರಸಿದ್ಧವಿದ್ದ, ಚೀನಾ-ಜಪಾನುಗಳೆರಡೂ ಇಂದು ರಕ್ತದ ಕಾಲುವೆಯನ್ನು ಹರಿಸತೊಡಗಿವೆ. ಚೀನಿಯರ ಸ್ವಾತಂತ್ರ್ಯವು ಸೂರೆಯಾಗತೊಡಗಿದೆ. ಈ ಶೋಚನೀಯ ಪರಿಸ್ಥಿತಿಗೆ ಅನೇಕರು ಜಪಾನಿನ ಮೇಲೆ; ಅನೇಕ ಬಗೆಯ ಆರೋಪಗಳನ್ನು ಹೊರಿಸಬಹುದು. ಇವುಗಳಲ್ಲಿ ಹಲವು ಸತ್ಯವೂ ಇರಬಹುದು. ಈಗ ನಮಗೆ ತಿಳಿದ ಕಾರಣಗಳು ಬ್ರಿಟಿಶರ ಸುದ್ದಿಗಾರರಾದ ರೂಟರರಿಂದಾಗಲೀ ಇಲ್ಲವೆ ಚೀನೀ ಜನರ ಮುಖಾಂತರವಾಗಿಯಾಗಲೀ ಬಂದು ಮುಟ್ಟಿವೆ. ಆದರೆ ಪ್ರತ್ಯಕ್ಷವಾಗಿ, ಜಪಾನಿಯರು ಯಾವ ಕಾರಣಗಳನ್ನು ಹೇಳುತ್ತಿರುವರೆಂಬುದನ್ನು ಕೇಳಿಕೊಂಡ ಮೇಲೆಯೇ ನಮಗೆ ನಿಜವಾಗಿ ಅಭಿಪ್ರಾಯ

ಕೊಡಲು ಅಧಿಕಾರವು ಬರುತ್ತದೆ. ಇಲ್ಲದಿದ್ದರೆ ನಮ್ಮ ನಿರ್ಣಯವು ಏಕ ಪಕ್ಷೀಯವಾಗುವದು. ಆದುದರಿಂದ ಜಪಾನಿಯರ ಕಾರಣಗಳನ್ನು ವಿಮರ್ಶಿಸುವದು ಅವಶ್ಯವಾಗಿದೆ.

ಈ ಯುದ್ಧದ ಮೂಲವು ಒಂದು ಒಂದುವರೆ ವರ್ಷದ ಹಿಂದೆಯೇ ಇದೆ. ೧೯೩೭ ನೇ ಜುಲೈ ತಿಂಗಳಲ್ಲಿ ಪೀಪಿಂಗ್‌ನಗರದ ಸಮೀಪದಲ್ಲಿರುವ ಮಾರ್ಕೋಪೋಲೋ ಸೇತುವೆಯ ಹತ್ತರ ಚೀನಾ-ಜಪಾನಿಯರಲ್ಲಿ ಚಕಮಕಿಯಾಗಿ ಗುಂಡಿನ ಮಳೆಸುರಿಯಿತು. ಯಾರು ಮೊದಲು ಅಕ್ರಮವನ್ನು ನಡೆಯಿಸಿದರೆಂಬುದು ಇನ್ನೂ ನಿರ್ಣಯವಾಗಿಲ್ಲ. ಪರಸ್ಪರರು ಆರೋಪಗಳನ್ನು ಮಾಡುತ್ತಾರೆ. ನಿಜಾಂಶವು ತಿಳಿಯುವದೂ ಕಠಿಣವಾಗಿದೆ. ಅನೇಕ ದಿನಗಳಿಂದ ನಡೆದು ಬಂದ ಇಬ್ಬರಲ್ಲಿಯ ಮನಸ್ತಾಪವು ಜುಲೈ ತಿಂಗಳಿನಲ್ಲಿ ಹೊರಬಿದ್ದಿತೆಂದು ಹೇಳಬಹುದು. ಅದೇ ಇಂದು ಲಕ್ಷಾಂತರ ಮಾನವರ ಮೃತ್ಯುರೂಪವಾಗಿ ನಿಂತಿದೆ.

ಯುದ್ಧವು ಪ್ರಾರಂಭವಾಗಿ, ಸಾವಿರಾರು ಮಾನವರ ಸಂಹಾರವಾದರೂ, ಎಲ್ಲ ಯುದ್ಧೋಪಕರಣಗಳನ್ನು ಎರಡೂ ರಾಷ್ಟ್ರಗಳು ಉಪಯೋಗಿಸುತ್ತಿದ್ದರೂ, ಅನೇಕ ಪಟ್ಟಣಗಳು ನಾಶಮಾಡಲ್ಪಡುತ್ತಿದ್ದರೂ ಬಹಿರಂಗವಾಗಿ ನಾವು ಯುದ್ಧವನ್ನು ಹೂಡಿರುವೆವು, ಎಂದು ಸಾರಲು ಎರಡೂ ರಾಷ್ಟ್ರಗಳು ಹಲವು ದಿನಗಳ ವರೆಗೆ ಸಿದ್ಧವಿರಲಿಲ್ಲ. ಯುದ್ಧವೆಂದು ಸಾರಿದರೆ, ಯುದ್ಧದ ನಿಯಮದಂತೆ ಎಲ್ಲ ಪರರಾಷ್ಟ್ರಗಳು ತಮಗೆ ಯುದ್ಧಸಾಮಗ್ರಿಗಳನ್ನು ಕೊಡುವದಿಲ್ಲವೆಂಬ ಭೀತಿಯೇ ಇದಕ್ಕೆ ಕಾರಣವು. ಯುದ್ಧವು ಭೀಕರವಾಗಿ ಲಕ್ಷಾವಧಿ ನಿರಪರಾಧಿಗಳ ಪ್ರಾಣಹರಣವಾಗುತ್ತಿದ್ದರೂ ಶಾಂತಿಮಂತ್ರವನ್ನೂ ಸ್ವಾತಂತ್ರ್ಯದಉಚ್ಚತತ್ವದ ಬಡಾಯಿಯನ್ನೂ ಕೊಚ್ಚಿಕೊಳ್ಳುತ್ತಿರುವ ಪಾಶ್ಚಾತ್ಯ ರಾಷ್ಟ್ರಗಳು ಕಣ್ಣು ಮುಚ್ಚಿಕೊಂಡು, ಕುಳಿತಿರುವವು. ಯುದ್ಧ ಸಾಮಗ್ರಿಗಳನ್ನು ಎರಡೂ ರಾಷ್ಟ್ರಗಳಿಗೆ ಒದಗಿಸುತ್ತ ಧನವನ್ನು ಸೂರೆಗೊಳ್ಳುತ್ತಿರುವವು. ಇದೆಂತಹ ಸ್ವಾತಂತ್ರ್ಯದ ಪ್ರೀತಿ ನೋಡಿ.

## ಜಪಾನಿನ ಸ್ಥಿತಿ

ಜಪಾನ ದೇಶದ ಪರಿಸ್ಥಿತಿಯು ಕೂಡ ಅತ್ಯಂತ ಶೋಚನೀಯವಿದೆ. ಇಲ್ಲಿ ನಡೆದ ಘಟನೆಗಳನ್ನೆಲ್ಲ ನಿರೀಕ್ಷಿಸುವ ಪ್ರತಿಯೊಬ್ಬರಿಗೂ ಜಪಾನ ರಾಷ್ಟ್ರವು ಯುದ್ಧ ನಡೆಯಿಸಲು ಸಿದ್ಧವಿರಲಿಲ್ಲೆಂಬುದು ಒಡೆದು ಕಾಣುವದು. ಸರಕಾರಕ್ಕೆ ಈ ಯುದ್ಧವು ನಾಲ್ಕೈದು ವರುಷ ನಡೆಯಬಹುದೆಂದು ಅನಿಸಹತ್ತಿದ್ದರಿಂದ ಆ ರೀತಿಯಾಗಿ ಬಂದ ಕಷ್ಟಗಳಿಗೆಲ್ಲ ಸಿದ್ಧರಿರಲು ಜನರಿಗೆ ಎಚ್ಚರಕೊಡಹತ್ತಿದೆ. ಮಿತ ವ್ಯಯದಿಂದ ಜೀವಿಸಲು ದಿನಾಲು ಪ್ರಕಟನೆಗಳು ಪ್ರಕಟವಾಗುತ್ತಲಿವೆ. ಪರದೇಶದ ವ್ಯಾಪಾರವು ಅನೇಕ ನಿಯಮಗಳಿಗೆ ಒಳಗಾಗಿದೆ. ತಿಂಡಿತೀರ್ಥಗಳಲ್ಲಿಯೂ ಉಡಿಗೆ ತೊಡಿಗೆಗಳಲ್ಲಿಯೂ ಮಿತವ್ಯಯದಿಂದ ಇರಲು ಪತ್ರಿಕೆಗಳು ಹಂಚಲ್ಪಡುತ್ತಲಿವೆ. ಆಮದು ಪ್ರತಿತಿಂಗಳಲ್ಲಿಯೂ ಕಡಿಮೆಯಾಗತೊಡಗಿದೆ. ಪರದೇಶಗಳಿಂದ ಬರುತ್ತಿರುವ ಮಾಂಸಾಹಾರವನ್ನು ನಿಲ್ಲಿಸಿ 'ತಿಮಿಂಗಿಲ' ದಿಂದಲೇ ಸಾಗಿಸಿಕೊಳ್ಳಿರಿ, ಎಂದು ಸರಕಾರವು ಭೋಧಿಸುತ್ತಿರುವದು. ಪೆಟ್ರೋಲ ಮೊದಲಾದವು ಯುದ್ಧಕ್ಕೆ ಬೇಕಾಗುವದರಿಂದ ಮೋಟಾರ ಪ್ರಯಾಣವನ್ನು ಜನರು ಕಡಿಮೆ ಮಾಡಬೇಕಾಗಿದೆ. ಕಲ್ಲಿದ್ದಲಿಗಳಿಂದ ಮೋಟಾರು ನಡೆಯಿಸುವ ಯೋಜನೆಯು ಕೈಕೊಳ್ಳಲ್ಪಟ್ಟಿದೆ. ಇನ್ನುಮುಂದೆ ಮೋಟಾರ ಪ್ರವಾಸವನ್ನೇ ನಿಲ್ಲಿಸಿಬಿಡುವರೆಂದು ವಾರ್ತೆಯಿದೆ. ಹೊಸಬಟ್ಟೆಗೆ ಹಣವನ್ನು ಹಾಕದೆ, ಇದ್ದುದರಲ್ಲಿಯೇ ಸಾಗಿಸಹತ್ತಿದ್ದಾರೆ. ತಿಂಡಿ-ತೀರ್ಥಗಳು ಕಡಿಮೆಯಾಗಿವೆ. ಪ್ರತಿಯೊಂದು ಪದಾರ್ಥದ ಧಾರಣೆಯು ಮಿತಿಯಿಲ್ಲದೆ ಏರುತ್ತಲಿದೆ, ಜೀವನದ ಖರ್ಚು ೧೦೦ಕ್ಕೆ ೩೦ ರಂತೆ ಹೆಚ್ಚಾಗಿದೆ. ಇದೇ ರೀತಿಯಾಗಿ ಇನ್ನೆರಡು ಮೂರು ವರುಷ ಸಾಗಿದರೆ, ೫೦ರ ವರೆಗೆ ಏರುವದರಲ್ಲಿ ಸಂದೇಹವಿಲ್ಲ. ಆಮದು ಕಡಿಮೆಯಾಗಿರುವದರಿಂದ ಎಷ್ಟೋ ಕಾರ್ಖಾನೆಗಳು ದಿವಾಳಿ ತೆಗೆಯುತ್ತಲಿವೆ. ನಿರುದ್ಯೋಗವು ಬೆಳೆಯತೊಡಗಿದೆ. ಯುದ್ಧದ ಕಾರ್ಖಾನೆಗಳು ಹೆಚ್ಚುತ್ತಲಿವೆ. ಈ ಕಾರ್ಖಾನೆಗಳ ಕೂಲಿಕಾರರ ಕೈಯಲ್ಲಿ ಹಣವು ಓಡಾಡುತ್ತಿರುವದರಿಂದ ಟೋಕಿಯೋ ನಗರದಲ್ಲಿ ವೇಶ್ಯೆಯರ ಸಂಖ್ಯೆಯು ೧೦೦ಕ್ಕೆ ೨೦ರಷ್ಟು ಹೆಚ್ಚಾಗಿ ಬೆಳೆಯತೊಡಗಿದೆ.

ಯುದ್ಧಕ್ಕೆಂದು ಧನಸಹಾಯವನ್ನು ಸರಕಾರವು ದೊರಕಿಸುತ್ತಲಿದೆ. ಬಡವನಿಂದ ಬಲ್ಲಿದರ ವರೆಗೂ ಸಹಾಯ ಮಾಡುತ್ತಿದ್ದಾರೆ. ೧ ಎನ್ನಿನಿಂದ ಮೂರು, ನಾಲ್ಕು ಕೋಟಿ ಎನ್ನುಗಳ ವರೆಗೆ ಕೊಟ್ಟದ್ದೂ ಉಂಟು. ಯುದ್ಧವು ಪ್ರಾರಂಭವಾದ ೬ ತಿಂಗಳಲ್ಲಿಯೇ ೨೦ ಕೋಟಿ ಎನ್ನುಗಳು ವಸೂಲು ಮಾಡಲ್ಪಟ್ಟವು. ಕೂಲಿಕಾರರು ತಮ್ಮ ದುಡಿತದಲ್ಲಿ ವಿಮಾನ ಗಳನ್ನು ಕೊಂಡು ಯುದ್ಧಕ್ಕೆ ಕಾಣಿಕೆಯಾಗಿ ಅರ್ಪಿಸಿರುವರು. ಅದರಂತೆ ವೃತ್ತಪತ್ರಗಳು ಕೂಡ ಸಾರ್ವಜನಿಕರಿಂದ ಹಣವನ್ನು ಎತ್ತಿ ವಿಮಾನ ಗಳನ್ನು ಕೊಂಡುಕೊಡುತ್ತಿರುವರು.

ವಿಮಾನಗಳ ದಾಳಿಗಳಿಗಾಗಿ ಜನರು ಭಯಭೀತರಾಗಿರುವರು. ಸರಕಾರವೂ ಕೂಡ ಜನರಿಗೆ ರಕ್ಷಣೆಯ ಶಿಕ್ಷಣವನ್ನು ಕೊಟ್ಟು ಜನತೆಗೆ ಧೈರ್ಯ ವನ್ನು ಕೊಡುತ್ತಲಿರುವದು. ಸರಕಾರದ ಅಪ್ಪಣೆಯಾದ ಕೂಡಲೆ, ದೀಪ ಗಳನ್ನು ಆರಿಸಬೇಕೆಂದುಗೊತ್ತಾಗಿದೆ. ಆ ಸಮಯದಲ್ಲಿ ಬೀಡಿಗಳನ್ನು ಕೂಡ ಸೇದಕೂಡದೆಂಬ ಕಟ್ಟಪ್ಪಣೆ. ವಿಮಾನದ ದಾಳಿಯು ಬಂದ ಸಮಯದಲ್ಲಿ ರಕ್ಷಿಸಲು ಸಾವಿರಾರು ಜನರು ವಾಸಿಸಲು ಬರುವಂಥ ನೆಲಮಾಳಿಗೆಗಳು ಏರ್ಪಟ್ಟಿವೆ. ವಿಷವಾಯುವಿನಿಂದ ರಕ್ಷಿಸಿಕೊಳ್ಳಲು ಮಾಸ್ಕ (ಮುಖವಾಡ) ಗಳನ್ನು ಎಲ್ಲರಿಗೂ ಹಂಚಲಾಗಿದೆ. ಪ್ರತಿ ಮನೆಯ ಮುಂದೆಯೂ ಎರಡು ಕೊಡ ನೀರು, ಬೆಂಕಿ ಆರಿಸುವ ಸಾಧನಗಳು ಇರಬೇಕೆಂದು ಸರಕಾರದ ಆಜ್ಞೆ ಹೊರಟಿದೆ. ಬಾಂಬು ಬಿದ್ದ ಸಮಯದಲ್ಲಿ ಬೆಂಕಿಯನ್ನು ಆರಿಸಲು ಪರಸ್ಪರರು ನೆರವಾಗಬೇಕೆಂದು ಪತ್ರಿಕೆಗಳು ಹಂಚಲ್ಪಟ್ಟಿವೆ. ಇನ್ನೂ ವರೆಗೂ ಯಾವ ಪಟ್ಟಣವೂ ದಾಳಿಗೆ ಈಡಾಗಿಲ್ಲ. ಜಪಾನಿನ ಮನೆಗಳು ಬರಿಯ ಕಟ್ಟಿಗೆ ಮನೆಗಳು ಇರುವದರಿಂದ ಬಾಂಬಿನಿಂದ ಅಗ್ನಿಪ್ರಳಯವೇ ಆಗುವ ಸಂಭವವದೆ.

## ಜಪಾನಿಯರ ದೇಶಪ್ರೇಮ

ಇಂಥ ವಿಷಮ ಪರಿಸ್ಥಿತಿಯಲ್ಲಿ ಕೂಡ ಜನರು ಶಾಂತಚಿತ್ತರಾಗಿರು ವರು. ಸರಕಾರದ ಕೃತಿಗಳು ಅನೇಕ ಜನರ ಮನಸ್ಸಿಗೆ ಬರುತ್ತಿರಲಿಕ್ಕಿಲ್ಲ. ಆದರೆ ರಾಷ್ಟ್ರವು ಗಂಡಾಂತರದಲ್ಲಿರುವಾಗ ಸರಕಾರಕ್ಕೆ ಸಹಾಯಮಾಡು

ವದೇ ತಮ್ಮ ಕರ್ತವ್ಯವೆಂದು ತಿಳಿದು, ಜನರು ಸರಕಾರದೊಡನೆ ಸಹಕರಿಸು ತ್ತಿರುವರು. ಮತಭೇಧವನ್ನು ಹೊರಗೆಡಹುವ ಸಮಯವು ಇದಲ್ಲವೆಂದು ಪ್ರತಿಯೊಬ್ಬ ಜಪಾನಿಯು ತಿಳಿಯುವನು. ದೇಶದ್ರೋಹಿಗಳನ್ನು ಸಂಹರಿ ಸುವುದರಲ್ಲಿ ಜಪಾನಿಗಳು ಹಿಂದೆ ಮುಂದೆ ನೋಡುವದಿಲ್ಲ. ಅನೇಕ ಅಧಿ ಕಾರಿಗಳು ಮಿತಿಮೀರಿ ಅನ್ಯಾಯವನ್ನು ಮಾಡುತ್ತಿದ್ದರೂ ಜಪಾನಿಗಳು ಕೇವಲ ದೇಶಪ್ರೇಮದಿಂದ ಸಹಿಸುತ್ತಿರುವರು. ದೇಶದ ಗೌರವಕ್ಕಾಗಿ ಎಲ್ಲವನ್ನೂ ಸಹನಮಾಡುತ್ತಿರುವರು. ಅತ್ಯಂತ ಶ್ರೀಮಂತನ ಮಗನಿಂದ ತಿರುಕನ ಮಗನ ವರೆಗೂ ಎಲ್ಲ ತರುಣರು ಯುದ್ಧಕ್ಕೆ ಸಿದ್ಧರಾಗಿದ್ದಾರೆ. ಜಪಾನಿಯರನ್ನು ಸಿಟ್ಟಿಗೆಬ್ಬಿಸಬೇಕಾದರೆ, 'ನೀನು ದೇಶಪ್ರೇಮಿಯಲ್ಲ'ವೆಂ ದರೆ ಸಾಕು, ಅವನು ಬೆಂಕಿ-ಬೆಂಕಿಯಾಗುವನು. ಹಿಂದುಮುಂದಿನ ವಿಚಾರ ವಿಲ್ಲದೆ ಆಕ್ಷೇಪಿಸಿದವನನ್ನು ಯಮಸದನಕ್ಕೆ ಅಟ್ಟಲು ಸಿದ್ಧನಾಗುವನು. ತಮ್ಮಲ್ಲಿ ಎಷ್ಟೇ ಮತಭೇದಗಳು ಅಂತಃಕಲಹಗಳು ಇದ್ದರೂ ರಾಷ್ಟ್ರಕ್ಕಾಗಿ ಅವೆಲ್ಲವನ್ನೂ ಮರೆತು, ಐಕ್ಯಮತ್ಯದಿಂದ ಹೋರಾಡುವರು. ಜಪಾನಿನ ಈ ಗುಣವೇ ಅವರ ಪ್ರಗತಿಯ ಮೂಲವಾಗಿರುವದು. ಭಾರತೀಯರು ಜಪಾನಿ ಯರಿಂದ ಈ ಗುಣವನ್ನು ಅನುಕರಣ ಮಾಡುವದು ಅವಶ್ಯವಿದೆ.

ಯುದ್ಧವು ಪ್ರಾರಂಭವಾದಂದಿನಿಂದ ಸಾವಿರಾರು ಜನರಿಗೆ ಕರೆ ಬಂದಿದೆ. ಶ್ರೀಮಂತರು ಬಡವರೆಂಬ ಭೇದವಿಲ್ಲದೆ ಎಲ್ಲರೂ ಹೊರಟಿದ್ದಾರೆ. ವಿಶ್ವವಿದ್ಯಾಲಯಗಳಲ್ಲಿ ಪಂಡಿತರಾದ ಅನೇಕರು ಒಬ್ಬ ಸಾದಾ ಅಧಿಕಾರಿಯ ಕೈಯಲ್ಲಿ ಸಿಪಾಯಿಯಂತೆ ಕಾರ್ಯಮಾಡುತ್ತಾರೆ. ಪ್ರತಿಯೊಬ್ಬ ತರುಣ ನಿಗೂ ಆಹ್ವಾನವು ಬರುತ್ತದೆ. ಬೇನೆಯಿಂದ ಬಳಲುವವರಿಗೆ ಮಾತ್ರ ಬಿಡುವು ಇರುವದು. 'ದೇಶದ ಕರೆ ಬಂದಾಗ ತಾನು ಬೇನೆಬಿದ್ದೆನಲ್ಲ' ಎಂಬ ದುಃಖ ದಿಂದ ಆತ್ಮಹತ್ಯೆಯನ್ನು ಮಾಡಿಕೊಂಡವರು ಅನೇಕರಿರುವರು. ೪೮ ವರ್ಷದ ಒಳಗಿನವರಿಗೆ ಯುದ್ಧಕ್ಕೆ ಕರೆ ಬರುವದರಿಂದ ಹೆಚ್ಚಾಗಿ ವಯಸ್ಕರು ತಮಗೆ ದೇಶಸೇವೆ ಮಾಡುವ ಸಮಯವನ್ನು ಕಲ್ಪಿಸಿಕೊಡಬೇಕೆಂಬ ಲಕ್ಷಾಂತರ ಅರ್ಜಿಗಳು ಸರಕಾರಕ್ಕೆ ಹೋಗಿರುವವು. ಮನೆಯಲ್ಲಿ ನರಳುವ ತಂದೆ-ತಾಯಿ ಗಳೂ ಹಣವೂ ಜಪಾನಿ ತರುಣರಿಗೆ ಯುದ್ಧದಲ್ಲಿ ಭಾಗವಹಿಸಲು ತಡೆಯುವ ದಿಲ್ಲ. ಅಂತಹ ಉಜ್ವಲ ದೇಶಪ್ರೇಮ.

ಪ್ರತಿದಿನವೂ ವೀರರನ್ನು ಬೀಳ್ಕೊಡುವ ಸಮಾರಂಭವು ನಡೆಯುತ್ತದೆ. ತಂದೆ-ತಾಯಿಗಳು, ಅಕ್ಕ-ತಂಗಿಯರು, ತಮ್ಮ ಮಕ್ಕಳು ಯಮನೊಡನೆ ಹೋರಾಡಲು ಹೊರಟಿರುವರೆಂದು ಗೊತ್ತಿದ್ದರೂ ಯಾರೂ ಕಣ್ಣೀರಿಡದೆ, ಅವರಿಗೆ, 'ಬನ್ನಂಜಾಯ' (ಹತ್ತು ಸಾವಿರ ವರುಷ ಬದುಕು) ಎಂಬ ಜಯ ಘೋಷದೊಡನೆ ಸನ್ಮಾನಿಸಿ ಕಳಿಸುವರು. ರೇಲ್ವೆಯು ಬಿಡುವ ಸಮಯ ದಲ್ಲಿಯ ಈ ಜಯಘೋಷವು ರೋಮಾಂಚಕಾರಿಯಾಗಿರುವದು. ನನ್ನ ಸಹಪಾಠಿಗಳನ್ನು ಯುದ್ಧಕ್ಕೆ ಬೀಳ್ಕೊಡಲು ನಾನು ಎಷ್ಟೋಸಾರಿ ಹೋಗಿ ದ್ದರೂ ಕಣ್ಣೀರುದುರಿಸಿದ ಒಬ್ಬ ಹೆಂಗಸನ್ನಾದರೂ ನಾನು ನೋಡಿಲ್ಲ. ಮಗನ ಮರಣವಾರ್ತೆಯು ಬಂದರೂ ತಂದೆತಾಯಿಗಳು ದುಃಖಪ್ರದರ್ಶನ ಮಾಡದೆ ಸಹಿಸುವದನ್ನು ನೋಡಿ, ನಾನಂತೂ ಆಶ್ಚರ್ಯಚಕಿತನಾಗಿದ್ದೇನೆ. ತಮ್ಮ ದುಃಖದಿಂದ ರಾಷ್ಟ್ರದ ಮೇಲೆ ಎಲ್ಲಿ ಕೆಟ್ಟ ಪರಿಣಾಮವಾಗುವದೋ ಎಂದು ಬಗೆದು ಸಹಿಸುವದು ಅದಕ್ಕಿಂತಲೂ ಆಶ್ಚರ್ಯಕರವು.

ಜಪಾನಿಯರ ವೃತ್ತಿಯನ್ನರಿಯದವರು, ಯುದ್ಧದಿಂದ ಜಪಾನವು ದಿವಾಳಿ ತೆಗೆಯುವದೆಂದು ಭಾವಿಸಿರಬಹುದು. ಜಪಾನದಲ್ಲಿ ಆರ್ಥಿಕ ಮುಗ್ಗಟ್ಟು ಇರುವದೂ ನಿಶ್ಚಯ. ಆದರೆ, ಸರಕಾರವು ರಾಷ್ಟ್ರದ ರಕ್ಷಣೆ ಗಾಗಿ ಜನರ ಆಸ್ತಿಪಾಸ್ತಿಗಳನ್ನು ಅಪೇಕ್ಷಿಸಿದರೆ ಸರ್ವಸ್ವವನ್ನೂ ತ್ಯಾಗ ಮಾಡಲು ಜನಾಂಗವು ಸಿದ್ಧವಾಗಿರುವದು. ಅವರ ಕಣ್ಣಮುಂದೆ ರಾಷ್ಟ್ರ ವೊಂದೇ ಕಾಣುತ್ತಿರುವದು. ಬಡತನವನ್ನೂ, ಕಷ್ಟವನ್ನೂ ಸಹಿಸುವ ಅವರ ಸಿದ್ಧತೆಯು ದಿಗ್ಭ್ರಮೆಗೊಳಿಸುವದು. ಸರಕಾರವು ರಾಷ್ಟ್ರದ ಈ ಗುಟ್ಟನ್ನರಿತು ಎಂಥ ಕಠಿಣ ಪ್ರಸಂಗ ಬಂದರೂ ಮುಂದಡಿ ಇಡುತ್ತಿರುವದು. ಕಷ್ಟವನ್ನು ಸಹಿಸುವ ಪಾಠವನ್ನು ಜಪಾನಿನ ಪ್ರಕೃತಿದೇವಿಯೇ ಕಲಿಸಿರು ವಳು. ನಗುನಗುತ್ತ ಯುದ್ಧೋನ್ಮುಖರಾಗುತ್ತಿರುವ ತರುಣರ ಉತ್ಸಾಹವು ಅವರ್ಣನೀಯವಿದೆ.

ಭಾರತೀಯರು ಜಪಾನು ನಡೆಯಿಸಿದ ಸ್ವಾತಂತ್ರ್ಯದ ಹರಣವನ್ನು ನಿಷೇಧಿಸುವದು ಸ್ವಾಭಾವಿಕವೂ ಯೋಗ್ಯವೂ ಇಗಿದೆ. ಜಪಾನಿಯರು ಸರ್ವ ವಿಧದಲ್ಲಿಯೂ ಚೀನಿಯರಿಗಿಂತ ಬಲಿಷ್ಠರೆಂಬುವದರಲ್ಲಿ ಯಾವ ಸಂದೇ

ಹವೂ ಇಲ್ಲ. ಜಪಾನಿಯರು ಚೀನಿಯರ ಅನೇಕ ಸುಂದರವಾದ ಪಟ್ಟಣಗಳನ್ನು ನಾಶಪಡಿಸಿರುವದು ನಿಜ. ಆದರೆ ನಿರಪರಾಧಿಗಳಾದ ಹೆಂಗಳೆಯರನ್ನೂ ಮಕ್ಕಳನ್ನೂ ಕೊಲ್ಲುವರೆಂಬ ಸಂಗತಿಯು ಮಾತ್ರ ನಂಬಲಯೋಗ್ಯವಾಗಿದೆ. ಯುದ್ಧಕ್ಷೇತ್ರದಲ್ಲಿ ಬಾಂಬಿನ ಮಳೆಗರೆಯುವದು ಇಂದಿನ ಯುದ್ಧ ನೀತಿಯಾಗಿದೆ. ಯುದ್ಧಗಳು ಸಂಪತ್ತನ್ನು ಸೂರೆಗೊಳ್ಳುವದಕ್ಕಾಗಿ, ಮಾನವರ ನಾಶಕ್ಕಾಗಿ ಅಲ್ಲವೆಂಬ ತತ್ವವನ್ನು ಜಪಾನಿಯರೂ ಚೆನ್ನಾಗಿ ಅರಿತಿದ್ದಾರೆ. ಯುದ್ಧಕ್ಷೇತ್ರದಲ್ಲಿ ಬಾಂಬುಗಳನ್ನು ಎಸೆಯುವದರಿಂದ, ಅಲ್ಲಿರುವ ನಿರಪರಾಧಿಗಳ ಹಾನಿಯೂ ಆಗಿರಬಹುದು. ಆದರೆ ಅದು ಅಲ್ಲಿ ವಾಸಿಸುವವರ ಅಜಾಣತನ. ಇಂದು ಟೀಕಿಸುವ ಇಂಗ್ಲಿಷರಾದರೂ ಏನು ಮಾಡುತ್ತಿರುವರು? ವಾಯುವ್ಯ ಸರಹದ್ದಿನಲ್ಲಿ ನಿರಪರಾಧಿಗಳ ಮೇಲೆ ಬಾಂಬಿನ ಮಳೆಗರೆಯುವದಿಲ್ಲವೆ? ಅದನ್ನು ಕೇಳುವವರಾರು? ಇರಲಿ. ಆದರೆ ಜಪಾನು ನಿರಪರಾಧಿಗಳ ಕೊಲೆ ಮಾಡಲು ಕಾರಣಗಳಾವರೂ ಏನು ಎಂಬುದನ್ನು ಜನರು ವಿಚಾರ ಮಾಡಬೇಕು. ಜಪಾನಿಗಳ ಕಾರಣಗಳನ್ನು ಪೂರ್ಣವಾಗಿ ವಿಚಾರಮಾಡಿ, ಭಾರತೀಯರು ತಮ್ಮ ಅಭಿಪ್ರಾಯಗಳನ್ನು ಕಟ್ಟಬೇಕೆಂದೇ ನನ್ನ ಸ್ಪಷ್ಟ ಅಭಿಪ್ರಾಯ.

ಚೀನಿಯರು, ದುರ್ಬಲತೆಯೂ, ಒಡಕುಗಳೂ ಜಪಾನಿಯರ ಈ ಚಲ್ಲಾಟಕ್ಕೆ ಮುಖ್ಯ ಕಾರಣಗಳೆಂಬುದನ್ನು ನಾವು (ಭಾರತೀಯರು) ಮೊದಲು ನೆನಪಿನಲ್ಲಿಡಬೇಕು. ಚೀನಾ-ಜಪಾನ ಯುದ್ಧವು ಪ್ರಾರಂಭವಾಗುವದಕ್ಕಿಂತ ಮುಂಚೆ, ಚೀನಾದೇಶವು ಎರಡು ರಾಜ್ಯದಾಡಳಿತೆಯಲ್ಲಿ ವಿಭಾಗಿಸಲ್ಪಟ್ಟಿತ್ತು. ರಶಿಯನ್ನರ ಕೈವಾಡದಿಂದ ನಡೆಯುತ್ತಿರುವ ಉತ್ತರ ಚೀನಾದ ಕಮ್ಯುನಿಝಂ ಸರಕಾರ. ಇನ್ನೊಂದು ಇಂದು ಅಖಂಡ ರಾಷ್ಟ್ರದ ನೇತೃತ್ವವನ್ನು ವಹಿಸಿದ ಚೆಯಾಂಗ ಕೈ ಷೇಕನ ಚೀನಾ ಸರಕಾರ (ದಕ್ಷಿಣ). ಅಖಂಡ ಚೀನವನ್ನು ಪ್ರಜಾಪ್ರಭುತ್ವದಲ್ಲಿ ತರುವದೇ ಚೆಯಾಂಗ ಕೈ ಷೇಕನ ಗುರಿ. ಉತ್ತರ ಚೀನಿಯರು ಇಡಿ ರಾಷ್ಟ್ರವು ಕಮ್ಯುನಿಝಂ ತತ್ವವನ್ನು ಸ್ವೀಕರಿಸಬೇಕೆನ್ನುವರು. ಇದರಿಂದ ಚೆಯಾಂಗ ಕೈ ಷೇಕನ ರಾಷ್ಟ್ರನಿರ್ಮಾಣ ಕಾರ್ಯವು ಪೂರ್ಣವಾಗಿ ರೂಪಗೊಳ್ಳಲಿಲ್ಲ.

ರಶಿಯವು ಕಮ್ಯುನಿಝಂ ತತ್ವವನ್ನು ಸ್ವೀಕರಿಸಿದ್ದನ್ನು ಕಂಡು ಜಪಾನಿಯರು ಎಲ್ಲಿ ಅದರ ಗಾಳಿಯು ಜಪಾನಿನ ಮೇಲೆ ಬೀಳುವದೋ ಎಂದು ಭಯಭೀತರಾಗಿದ್ದರು. ಉತ್ತರ ಚೀನವು ಆ ತತ್ವವನ್ನು ಸ್ವೀಕರಿಸಿದ ಮೇಲಂತೂ ಈ ಭೀತಿಯು ಮತ್ತಿಷ್ಟು ಹೆಚ್ಚಾಯಿತು. ಎಲ್ಲಿ ತಮ್ಮ ನಾಗರಿಕತೆಗೆ ಧಕ್ಕೆ ತಗಲುವದೋ ಎಂಬುದೇ ಇವರ ಭಯ. ಹತ್ತಿರವಿರುವ ಚೀನಾದಂಥ ೪೦ ಕೋಟಿ ಪ್ರಜಗಳುಳ್ಳ ರಾಷ್ಟ್ರವು ಒಮ್ಮೆ ಕಮ್ಯುನಿಝಂ ತತ್ವವನ್ನು ಸ್ವೀಕರಿಸಿದರೆ, ೬ ಕೋಟಿ ಜನಸಂಖ್ಯೆಯುಳ್ಳ ಜಪಾನವು ಎಂದೂ ಬಾಳಲಾರದೆಂಬುದೇ ಅವರ ಸಿದ್ಧಾಂತ. ತನ್ನ ನೆರೆಹೊರೆಯವರು, ಯಾವ ತತ್ವದಿಂದ ಇರುವರೋ ಆ ತತ್ವವನ್ನಾದರೂ ಸ್ವೀಕರಿಸಬೇಕು. ಇಲ್ಲವಾದರೆ, ತಮ್ಮ ಸ್ವತ್ವವನ್ನು ಕಾಯ್ದುಕೊಳ್ಳಲು ಯಾವಾಗಲೂ ಹೋರಾಡುವ ಅಶಾಂತಿಯ ಮಾರ್ಗ ಸ್ವೀಕರಿಸಬೇಕು. ಇವೆರಡೇ ಮಾರ್ಗಗಳು ಇಂದು ಜಗತ್ತಿನಲ್ಲಿವೆ. ಆದುದರಿಂದಲೆ ಪ್ರತಿಯೊಂದು ರಾಷ್ಟ್ರವು ತನ್ನ ಭದ್ರತೆಗಾಗಿ ಯಾವಾಗಲೂ ಪ್ರಯತ್ನಿಸುತ್ತಿರುವದು. ಬ್ರಿಟಿಶರು, ಭಾರತವು ತಮ್ಮ ಕೈಯಲ್ಲಿ ಭದ್ರವಾಗಿ ಉಳಿಯುವಂತೆ, ಅಫಘಾನಿಸ್ತಾನದೊಡನೆ ಮಾಡಿ-ಕೊಂಡ ಕರಾರುಗಳಂತೆ ಜಪಾನಿಯರೂ ಜಪಾನಕ್ಕೆ ಧಕ್ಕೆ ತಗಲುವಂಥ ತತ್ವಗಳಿಗೆ ಚೀನವು ಮಾನ್ಯತೆ ಕೊಡಬಾರದೆಂದು ಚೆಯಾಂಗ ಕೈ ಷೇಕನಿಗೆ, ಎಚ್ಚರಿಕೆ ಕೊಟ್ಟಿತು. ಚೆಯಾಂಗ ಕೈ ಷೇಕನು, ಕಮ್ಯುನಿಝಂ ತತ್ವವು ರಾಷ್ಟ್ರದಲ್ಲಿ ಹಬ್ಬದಂತೆ ಕೈಲಾದಮಟ್ಟಿಗೂ ಪ್ರಯತ್ನಿಸಿದನು. ಅವನು ೧೯೩೬ರಲ್ಲಿ ಉತ್ತರ ಚೀನಕ್ಕೆ ಹೋದಾಗ ಬಂಧಿಸಲ್ಪಟ್ಟನು. ಕಮ್ಯುನಿಝಂ ತತ್ವವನ್ನು ನಿರ್ವಾಹವಿಲ್ಲದೆ ಒಪ್ಪಿಕೊಂಡು ಮುಕ್ತನಾಗಬೇಕಾಯಿತು. ಇದರಿಂದ ಚೀನಾ-ಜಪಾನ ಯುದ್ಧವು ಸಿದ್ಧವೆಂದು ಅವನು ಮೊದಲೇ ಅರಿತಿದ್ದನು. ಆದ್ದರಿಂದಲೇ ಅನೇಕ ದಿನಗಳ ವರೆಗೆ ಯುದ್ಧವನ್ನು ಮುಂದೆ ತಳ್ಳಿದ್ದನು. ರಾಷ್ಟ್ರದ ಶಕ್ತಿಯು ಹೆಚ್ಚುವಂತೆ ಪ್ರಯತ್ನಿಸುತ್ತಿದ್ದನು. ಆದರೆ ಅನಿವಾರ್ಯವಾಗಿ ಯುದ್ಧಕ್ಕೆ ಎದುರಾಗಬೇಕಾಯಿತೆಂಬುದನ್ನು ನಾವು ತಿಳಿಯಬೇಕು. ಒಕ್ಕಟ್ಟು, ಸಿದ್ಧತೆ, ಸಂಘಟನೆಗಳಿಲ್ಲದೆ ಚೀನವು ಯುದ್ಧಮಾಡುವ ಪ್ರಸಂಗ ಬಂದಿದೆ. ಆದರೂ ಚೆಯಾಂಗ ಕೈ ಷೇಕನ ವ್ಯಕ್ತಿತ್ವದ ಮೂಲಕ ಇಂದು ಚೀನವು ಸಂಘಟಿತವಾಗತೊಡಗಿದೆ. ಐಕ್ಯವು

ಪ್ರಸ್ಥಾಪಿತವಾಗಿದೆ. ಈ ಸಂಘಟನೆಯು ಮೊದಲೇ ಆಗಿದ್ದರೆ ಚೀನದ ಮೇಲೆ ಕೈಯೆತ್ತುವ ಧೈರ್ಯವು ಯಾರಿಗೂ ಇರಲಿಲ್ಲ.

ಚೀನಿಯರ ವಿಷಯಕ್ಕೆ ನಮ್ಮ ಸಹಾನುಭೂತಿಯಿರುವದು ನ್ಯಾಯ ವಾದರೂ, ಜಪಾನದ ವಿಷಯಕ್ಕೆ ವಿರೋಧವನ್ನು ತಾಳುವದು ಯೋಗ್ಯವೇ ಎಂಬುದೇ ಮುಖ್ಯ ಪ್ರಶ್ನೆ. ಸ್ವಾತಂತ್ರ್ಯಸಂಗ್ರಾಮವನ್ನು ಹೂಡಿದ ಭಾರತ ದೇಶವು ಪರರಾಷ್ಟ್ರಗಳ ವಿಷಯಕವಾದ ತನ್ನ ಧೋರಣವನ್ನು ಮುನ್ನೋಟದಿಂದ ನಿರ್ಣಯಿಸಬೇಕೆಂದೇ ನಮ್ಮ ಅಭಿಪ್ರಾಯ.

## ಜಪಾನಿನ ಕೆನವರಿಕೆ

ಚೀನವು ಅನೇಕ ಕಚ್ಚಾ ಮಾಲುಗಳ ನೆಲೆವೀಡಾಗಿದೆ. ಅದರ ಆರ್ಥಿಕ ಸುಲಿಗೆಯನ್ನು ಪಾಶ್ಚಾತ್ಯರು ಮಾಡುತ್ತಿರುವರು. ಇದು ಜಪಾನಿಯರಿಗೆ ಸಹನವಿಲ್ಲ. ಜಪಾನಿನ ಕೈಗಾರಿಕೆಯು ವಿತಿಮೀರಿ ಬೆಳೆದುದರಿಂದಲೂ, ಜಗತ್ತಿನಲ್ಲಿರುವ ಪೇಟೆಗಳೆಲ್ಲವೂ ಪಾಶ್ಚಾತ್ಯರಿಂದ ವ್ಯಾಪಿಸಲ್ಪಟ್ಟದ್ದರಿಂದಲೂ, ಅವರು ಪೇಟೆಯನ್ನು ದೊರಕಿಸಲೇಬೇಕಾಗಿದೆ. ತನ್ನ ನೆರೆಯ ದೇಶದ ಮೇಲೆ, ತನಗೆ, ಅಧಿಕಾರವಲ್ಲದೆ ಬೇರೆಯವರಿಗಲ್ಲವೆಂದೇ ಅವರ ಸಿದ್ಧಾಂತ. ಇಂದು ಚೀನಾ ರಾಷ್ಟ್ರದಲ್ಲಿ ಉಂಟಾದ ಬದಲಾವಣೆಗಳ ಪರಿಣಾಮವು ಮರುದಿವಸವೇ ಜಪಾನಿನ ಮೇಲೆ ಆಗುವದರಿಂದಲೂ, ಜಪಾನಿನ ಭದ್ರತೆ ಗಾಗಿ, ಚೀನದ ಮೇಲೆ, ಪಾಶ್ಚಾತ್ಯರಿಗಿಂತಲೂ ತಮಗೇ ಅಧಿಕಾರವು ಹೆಚ್ಚಿರುವದೆಂದೂ, ಅವರ ಅಭಿಪ್ರಾಯ. ಚೀನದ ಸಂಪತ್ತಿನ ಮೇಲೆಯೂ, ಪೇಟೆಯ ಮೇಲೆಯೂ ತಮ್ಮ ಪ್ರಭುತ್ವದ ಅಪೇಕ್ಷೆಯು ನ್ಯಾಯವೆಂದು ಅವರು ತಿಳಿಯುವರು; ಅದಕ್ಕಾಗಿ ಹೋರಾಡುವರು. ಈ ಎರಡೂ ಅಪೇಕ್ಷೆ ಗಳು ಪೂರೈಸಿದರೆ, ಇಂದು ಜಪಾನಿನ ಕಷ್ಟಗಳು ಪರಿಹಾರವಾಗುವವೆಂದು ಅವರು ಭಾವಿಸುವರು. ಆದ್ದರಿಂದಲೇ ಚೀನದ ಆರ್ಥಿಕ ಸಂಪತ್ತನ್ನು ಸೂರೆ ಗೊಳ್ಳುವ ಅಧಿಕಾರವನ್ನು ಪಡೆಯಲು ಯತ್ನಿಸುತ್ತಿರುವರು.

ಒಟ್ಟಿನಲ್ಲಿ ಪಾಶ್ಚಾತ್ಯರಿಗಿಂತಲೂ ತನಗೇ ಚೀನದ ಮೇಲೆ ಅಧಿಕಾರ ಹೆಚ್ಚಿರುವದೆಂತಲೂ ಅಲ್ಲಿಯ ಸಂಪತ್ತಿನ ಮೇಲೆ ತಮ್ಮದೇ ಅಧಿಕಾರವೆಂ

ತಲೂ ಅದನ್ನು ದೊರಕಿಸುವದಕ್ಕಾಗಿಯೇ ಈ ಯುದ್ಧವೆಂತಲೂ ಜಪಾನು ಹೇಳುತ್ತಿರುವದು.

ಕಳೆದ ೧॥ ವರ್ಷದಲ್ಲಿ ಜಪಾನವು ಚೀನದ ಸಮುದ್ರದಂಡೆಯನ್ನೆಲ್ಲ ವ್ಯಾಪಿಸಿಕೊಂಡಿದೆ. ಮುಖ್ಯ ಪಟ್ಟಣಗಳೆಲ್ಲ ಜಪಾನಿಯರ ವಶವಾಗಿವೆ. ಚೀನದ ಈ ದುಸ್ಥಿತಿಯಲ್ಲಿ ಸ್ವಾತಂತ್ರ್ಯದ ದೊಡ್ಡ ದೊಡ್ಡ ತತ್ವಗಳನ್ನು ಹೇಳುವ ಯಾವ ರಾಷ್ಟ್ರವೂ ಚೀನಿಯರಿಗೆ ಸಹಾಯ ಮಾಡಲು ಮುಂದೆ ಬರುವಂತೆ ಕಾಣುವದಿಲ್ಲ. ಕೇವಲ ಬಾಯಿಮಾತಿನಿಂದ ಖಂಡಿಸುತ್ತಿರುವವು. ಪಾಪ! ಚೀನವು ಇವರನ್ನು ನಂಬಿ ಯುದ್ಧವನ್ನು ಹೂಡಿತು. ಬುರುಡಿಯನ್ನು ನಂಬಿ ಹೊಳೆ ಬೀಳಬಹುದೇ?

ಜಪಾನವು ಚೀನದೊಡನೆ ಸಂಧಿಯನ್ನು ಮಾಡಿಕೊಳ್ಳುವದಾದರೆ, ಕೆಳಗಿನ ಮೂರು ಕರಾರುಗಳನ್ನು ಹಾಕಿದೆ.

(೧) ಚೀನಾದೇಶವು ಮಂಚೂರಿಯಾ ದೇಶದೊಡನೆ ರಾಯಭಾರವನ್ನು ನಡೆಯಿಸಬೇಕು.

(೨) ಚೀನೀ ಸರಕಾರವು ಕಮ್ಯುನಿಝಂ ತತ್ವವನ್ನು ತ್ಯಜಿಸಬೇಕು. ಚೀನದಲ್ಲಿದ್ದ ಆ ತತ್ವವನ್ನು ನಾಶಮಾಡಲು ಜಪಾನಿನೊಡನೆ ಸಹಕರಿಸಬೇಕು. ಈ ತತ್ವವು ನಾಶವಾಗುವ ವರೆಗೆ ಚೀನದಲ್ಲಿ ಜಪಾನಿನ ಸೈನ್ಯವು ಇರತಕ್ಕದ್ದು.

(೩) ಚೀನಾ-ಜಪಾನ-ಮಂಚೂರಿಯಾ ಈ ಮೂರೂ ರಾಷ್ಟ್ರಗಳು ರಾಜಕೀಯ, ಆರ್ಥಿಕ ವಿಷಯಗಳಲ್ಲಿ ಸಹಕರಿಸತಕ್ಕದ್ದು.

ಈ ಮೂರೂ ಕರಾರುಗಳನ್ನು ಒಪ್ಪಿಕೊಂಡರೆ, ಜಪಾನಿಯರ ಉದ್ದೇಶವು ಸಫಲವಾಗುವದೆಂದೂ, ಚೀನರಿಂದ ನಾವೇನೂ ಕಪ್ಪ-ಕಾಣಿಕೆಗಳನ್ನು ಕೇಳುವದಿಲ್ಲೆಂದೂ, ಹೇಳುತ್ತಿರುವರು. ಅಲ್ಲದೆ ಚೀನವು ಸ್ವತಂತ್ರ ರಾಷ್ಟ್ರವಾಗಿ ಉಳಿಯುವದೆಂದೂ, ಇಲ್ಲದಿದ್ದರೆ?

## ಈ ಯುದ್ಧದಲ್ಲಿ ಬ್ರಿಟಿಶರ ಪಾತ್ರ

ಸದ್ಯದ ಚೀನಾ-ಜಪಾನದ ಯುದ್ಧದಲ್ಲಿ ಬ್ರಿಟಿಶ ಸಾಮ್ರಾಜ್ಯವಾದದ

ಕೈವಾಡವೆಷ್ಟಿರುವದೆಂಬದನ್ನು ನೋಡುವದು ಅವಶ್ಯವಿದೆ. ಸಾವಿರಾರು ಜನ ಬ್ರಿಟಿಶ ಬಂಡವಳಗಾರರ ಸ್ಥಿತಿಯು ಚೀನಾದೇಶದ ತಕ್ಕಡಿಯಲ್ಲಿ ತೂಗಿಸಿ ಡುತ್ತಲಿರುವದು. ಚೀನಾದಲ್ಲಿ ತಮ್ಮ ವ್ಯಾಪಾರದ ಸುಲಿಗೆಯು ಚನ್ನಾಗಿ ಸಾಗುವದಕ್ಕಾಗಿ ಯಾವಾಗಲೂ ಎಚ್ಚರ ತೆಗೆದುಕೊಳ್ಳುವರು. ಚೀನದ ಅಶಕ್ತತೆಯು ಇದಕ್ಕೆ ಅನುಕೂಲವಲ್ಲವೇ. ಬ್ರಿಟನ್‌ವು ಚೀನದ ಅಂತಃ ಕಲಹದಲ್ಲಿ ಕೈಹಾಕಿ ಒಂದು ಪಂಗಡದ ಬೆನ್ನುಕಟ್ಟಿದ ಅನೇಕ ಉದಾಹರಣೆ ಗಳಿವೆ. ಚೀನದ ಒಡಕಿಗೆ ಬ್ರಿಟಿಶರ ಈ ಧೋರಣವೂ ಒಂದು ಮಹತ್ವದ ಕಾರಣವಿದೆ.

ಬ್ರಿಟನ್‌ವು ತನ್ನ ಹಿತಸಂಬಂಧಗಳಿಗೆ ಪೌರ್ವಾತ್ಯ ದೇಶಗಳಲ್ಲಿ ಧಕ್ಕೆ ತಗಲದಂತೆ ಬೇಕಾದ ಉಪಾಯಗಳನ್ನು ಯೋಚಿಸಿ ಹೋರಾಡಲು ಸದಾ ಸಿದ್ಧವಾಗಿದೆ. ಈ ದೃಷ್ಟಿಯಿಂದಲೇ ತನ್ನ ಕಾರ್ಯಕ್ರಮಗಳನ್ನು ನಡೆಯಿ ಸುತ್ತಲಿದೆ. ಇದಕ್ಕೆ ಹಿಂದಿನ ರಶಿಯಾ ಜಪಾನ ಯುದ್ಧವೇ ಸಾಕ್ಷಿ. ರಶಿಯವು ಪೂರ್ವದೇಶಗಳಲ್ಲಿ ವಿಸ್ತಾರವಾಗುವದನ್ನು ಕಂಡು, ಬ್ರಿಟಿಶರು ವಿಚಾರ ಮಾಡಹತ್ತಿದ್ದರು. ಆ ಸಮಯದಲ್ಲಿ ಜಪಾನವು ಕೆಲಸಕ್ಕೆ ಬಾರದ ದೇಶ ವೆಂದು ಪಾಶ್ಚಾತ್ಯರು ತಿಳಿಯುತ್ತಿದ್ದರು. ರಶಿಯಾದವರಿಂದ ತಮ್ಮ ಹಕ್ಕು ಬಾಧ್ಯತೆಗಳಿಗೆ ಎಲ್ಲಿ ಧಕ್ಕೆ ತಗಲುವದೋ ಎಂದು ಸ್ನೇಹಿತರನ್ನು ಬ್ರಿಟಿಶರು ಹುಡುಕಹತ್ತಿದರು. ಯಾರ ಸ್ನೇಹವನ್ನೇ ಬಯಸಲಿ, ಅದರಲ್ಲಿ ತಮ್ಮ ಲಾಭವೇನೆಂಬುದನ್ನು ಬ್ರಿಟಿಶರು ಮೊದಲು ನೋಡುವರು. ಆ ಸಮಯ ದಲ್ಲಿ ಜಪಾನವು ಕೂಡ ರಶಿಯದ ಬೆಳವಣಿಗೆಯನ್ನು ಕಂಡು, ಭಯಗೊಂ ಡಿತ್ತು. ಇದನ್ನರಿತ ಬ್ರಿಟಿಶರು ಜಪಾನಿನೊಡನೆ ಸ್ನೇಹಬೆಳಿಸಿದರೆ, ಜಪಾನವು ರಶಿಯವನ್ನು ತಡೆಗಟ್ಟುವದೆಂದು ಬಗೆಯಿತು. ಹೊರಗಿನ ದೆವ್ವವು ಹೊರಗೇ ಹೋದಂತಾಗುವದೆಂದು ಜಪಾನಿಗೆ ಸ್ನೇಹದ ಕೈ ನೀಡಿತು. ಈ ರೀತಿಯ ಉಭಯತರ ಭೀತಿಯೇ "ಆಂಗ್ಲೋ-ಜಪಾನಿಯರ" ಒಪ್ಪಂದವಾಗಿ ಪರಿಣಮಿಸಿತು.

ಜಪಾನವು ಜಯವನ್ನು ಪಡೆಯಿತು. ಪಾಶ್ಚಾತ್ಯ ರಾಷ್ಟ್ರಗಳನ್ನು ಎದುರಿಸುವ ಸಾಮರ್ಥ್ಯವು ಪೌರ್ವಾತ್ಯರಲ್ಲಿಯೂ ಇದೆ, ಎಂಬುದನ್ನು

ಜಗತ್ತಿಗೆ ತೋರಿಸಿತು. ಈ ಜಯದಿಂದ ರಶಿಯದ ಕಿರುಕಳವು ನಾಶವಾಗಿ ಬ್ರಿಟನ್ನವು ೧೦ ವರ್ಷಗಳ ಕಾಲ ನಿಶ್ಚಿಂತವಾಯಿತು.

ಹೋದ ಮಹಾಯುದ್ಧದಲ್ಲಿ ಪೂರ್ವದೇಶದಲ್ಲಿರುವ ಈ ಶಾಂತಿಯಿಂದಲೇ ಬ್ರಿಟಿಶರು ತಮ್ಮ ಎಲ್ಲ ಶಕ್ತಿಯನ್ನು ಸಂಗ್ರಹಿಸಿ, ಜರ್ಮನಿಯೊಡನೆ ಹೋರಾಡಲುಅನುಕೂಲವಾಯಿತು. ಆ ಸಮಯದಲ್ಲಿ ಚೀನಾದ ಮುಂದಾಳುಗಳಾಗಿದ್ದ 'ಸನ್‌ಯತ್‌ಸೇಸರ' ಪ್ರೇರಣೆಯಂತೆ, ಜಪಾನವು ಬ್ರಿಟಿಶರ ವಿರುದ್ಧ ಯುದ್ಧ ಹೂಡಿದ್ದರೆ, ಜಪಾನವು ಬ್ರಿಟಿಶರ ದೇಶಗಳನ್ನು ಸುಲಭವಾಗಿ ಜಯಿಸಬಹುದಿತ್ತು. ಜರ್ಮನಿಯ ಹೊಡೆತದಿಂದ ಬ್ರಿಟನ್ನವು ಆಗ ಹಣ್ಣಾಗಿತ್ತು. ಆದರೆ ಜಪಾನಿಯರು, ಸ್ನೇಹಭಾವಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು ಜರ್ಮನಿಯೊಡನೆ ಯುದ್ಧ ಹೂಡಿ, ಚೀನಾದಲ್ಲಿನ ಕೆಲವು ಜರ್ಮನರ ಪ್ರದೇಶಗಳನ್ನು ಗೆದ್ದುಬ್ರಿಟಿಶರಿಗೆ ಭದ್ರತೆಯನ್ನುಂಟುಮಾಡಿದರು. ಆದರೆ ಜಪಾನಿನ ಬೆಳವಣಿಗೆಯನ್ನು ಸಹಿಸಲಾರದ ಬ್ರಿಟಿಶರು ಅವರ ಶಕ್ತಿಯನ್ನು ಕುಗ್ಗಿಸಲು ಮಾಡುತ್ತಿರುವ ಪ್ರಯತ್ನಗಳು ಬಹಳ ಮನೋರಂಜಕವಾಗಿವೆ.

ಮಹಾಯುದ್ಧವು ಮುಗಿದ ನಂತರ ಗೆದ್ದ ಭೂಮಿಗಳನ್ನು ಹಂಚಿಕೊಳ್ಳುವಾಗ ಅನೇಕ ಅನ್ಯಾಯಗಳು ನಡೆದವು. ಬ್ರಿಟಿಸರು, ಆಫ್ರಿಕಾದ ಜರ್ಮನ್ನರ ರಾಜ್ಯಗಳನ್ನು ಆಕ್ರಮಿಸಿಕೊಂಡಾಗ ಜಪಾನಿಯರು ಚೀನಾದಲ್ಲಿ ಇರುವ ಜರ್ಮನ್ನರ ಪ್ರದೇಶಗಳು ತಮಗೆ ದೊರೆಯಬೇಕೆಂದು ಹಟತೊಟ್ಟರು. ಈ ಪ್ರದೇಶಗಳು ಜಪಾನಿಯರಿಗೆ ದೊರೆತರೆ, ಜಪಾನವು ಬಲಿಷ್ಠವಾಗುವದೆಂದು ಬಗೆದು ಚಾಣಕ್ಯತಂತ್ರದಿಂದ ಅವು ಜಪಾನಕ್ಕೆ ದೊರೆಯದಂತೆ ಬ್ರಿಟನ್ ಮಾಡಿತು. ಆದರೆ ಉಳಿದ ರಾಜ್ಯಗಳ ಪಂಚಾಯತಿಯಿಂದ ದಕ್ಷಿಣಸಮುದ್ರದಲ್ಲಿರುವ ಜರ್ಮನ್ನರ ಕೆಲವು ದ್ವೀಪಗಳ ಮೇಲ್ವಿಚಾರಣೆಯ ಹಕ್ಕನ್ನು ಮಾತ್ರ ಜಪಾನು ಪಡೆಯಿತು.

ಮಹಾಯುದ್ಧದ ಕಾಲದಲ್ಲಿ ಜಪಾನವು ತನ್ನ ಕೈಗಾರಿಕೆಗಳನ್ನು ಹೆಚ್ಚಿಸಿಕೊಂಡು ಏಶಿಯಾಖಂಡದ ಎಲ್ಲ ಪೇಟೆಗಳಲ್ಲಿ ತನ್ನ ಸಾಮಾನುಗಳನ್ನು ಹರಡಿತು. ಬ್ರಿಟಿಶರು ಇದನ್ನು ಕಂಡು ಸಹಿಸದೆ, ತಮ್ಮ ಸಾಮ್ರಾಜ್ಯದಲ್ಲಿ ಇರುವ ಭಾರತ ಮೊದಲಾದ ದೇಶಗಳಲ್ಲಿ ಜಪಾನಿ ಸರಕುಗಳ ಮೇಲೆ ಸುಂಕ

ವನ್ನು ಹೇರಿ, ಅವರ ವ್ಯಾಪಾರವನ್ನು ತಡೆದರು. ಆದರೆ, ಚೀನಾದ ಮೇಲೆ ಪ್ರಭುತ್ವವಿಲ್ಲದ್ದರಿಂದ ಚೀನಿಯರಿಂದ ಜಪಾನಿನ ಸಾಮಾನುಗಳ ಮೇಲೆ ಬಹಿಷ್ಕಾರ ಬೀಳುವಂತೆ ಪ್ರೋತ್ಸಾಹಿಸಿದರು. ಅದು ಬೆಳೆಯುವಂತೆ ಸಾಹಸ ಪಟ್ಟರು. ಈ ಸಮಯದಲ್ಲಿ ರಶಿಯದ ಸಾಮ್ರಾಜ್ಯವಾದವನ್ನು ವಿರೋಧಿಸುವ ಕಮ್ಯುನಿಝಂ ತತ್ವವು ಮುಂದೆ ಬಂದು ಚೀನಾ-ಜಪಾನಗಳ ಸಂಬಂಧವನ್ನು ಮತ್ತಿಷ್ಟು ಕೆಡಿಸಿತು.

ಈ ರೀತಿಯಾಗಿ ಜಪಾನಿಗೆ ತನ್ನ ನೆರೆಯ ರಾಷ್ಟ್ರದಲ್ಲಿ ಕೂಡ ವ್ಯಾಪಾರ ಸಾಗಿಸಲು ಕಠಿಣವಾಯಿತು. ಬ್ರಿಟಿಶ ಸಾಮ್ರಾಜ್ಯದಲ್ಲಿ ಸ್ಥಾನವಿಲ್ಲದಂತಾಯಿತು. ಈ ಸಮಯಕ್ಕೆ ಆಂಗ್ಲೋ- ಜಪಾನ ಒಪ್ಪಂದದ ಅವಧಿಯೂ ಮುಗಿಯಿತು. ಬ್ರಿಟನ್ನು ಜಪಾನಿನಿಂದ ತನಗೆ ಏನೂ ಲಾಭವಿಲ್ಲೆಂದು ಬಗೆದು, ಪುನರ್ವಪ್ಪಂದಕ್ಕೆ ಸಮ್ಮತಿಸಲಿಲ್ಲ. ಜಪಾನ ದೇಶವು ಸ್ವಸಾಮರ್ಥ್ಯಗಳಿಂದ ಬಾಳುವ ಹಂಚಿಕೆಯನ್ನು ಹಾಕಹತ್ತಿತು.

ಚೀನಾ ದೇಶದಲ್ಲಿ ಬ್ರಿಟಿಶರ ಕೈವಾಡವಿರದಿದ್ದರೆ, ಜಪಾನ-ಚೀನಗಳಲ್ಲಿ ಈ ವಿಷಮ ಪರಿಸ್ಥಿತಿಯೇ ಉಂಟಾಗುತ್ತಿರಲಿಲ್ಲವೆಂದು ಖಂಡಿತವಾಗಿ ಹೇಳಬಹುದು.

ಈ ಎಲ್ಲ ಮಾತುಗಳನ್ನು ಹೇಳುವಾಗ ಜಪಾನಿನ ಕೃತಿಗಳನ್ನು ಸಮರ್ಥಿಸುವೆನೆಂದು ಮಾತ್ರ ಯಾರೂ ತಿಳಿಯಬಾರದು. ಶಕ್ತಿಯುತವಾದ ರಾಷ್ಟ್ರಗಳು ಚೀನವನ್ನು ಸುಲಿಯುತ್ತಿರುವಾಗ ಬಲಿಷ್ಠವಾದ ಜಪಾನವು ಸುಮ್ಮನಿರುವದು ಶಕ್ಯವೇ ? ಎಂಬುದೇ ನನ್ನ ವಾದ.

ಚೀನವು ತನ್ನ ಶಕ್ತಿ ಸಾಮರ್ಥ್ಯಗಳನ್ನು ನೋಡಿಕೊಂಡು ಮುಂದರಿಯಬೇಕಲ್ಲದೆ, ಹೆರವರ ಮಾತಿಗೆ ಕಿವಿಗೊಟ್ಟು ಸಾಗುವದು ಹಿತವಲ್ಲೆಂದು ನನಗೆ ತೋರುತ್ತದೆ. ಎರಡೂ ರಾಷ್ಟ್ರಗಳು ಸ್ನೇಹಸಂಬಂಧವನ್ನು ಬೆಳೆಯಿಸಿಕೊಂಡು, ಪಾಶ್ಚಾತ್ಯರ ಅಧಿಕಾರವನ್ನು ಮೊದಲು ಏಶಿಯಾಖಂಡದಿಂದ ನಾಶಪಡಿಸಬೇಕೆಂಬುದೇ ನನ್ನ ಬಯಕೆ. ಆ ಸಮಯವು ಬರಬಹುದೇ! ಜಪಾನಿಯರು ಚಾಣಕ್ಯತಂತ್ರದಲ್ಲಿಯೂ ಮತ್ತು ಪ್ರಚಾರಕಾರ್ಯದಲ್ಲಿಯೂ

ಅಷ್ಟು ಬಲ್ಲಿದರಲ್ಲ. ಆದುದರಿಂದಲೇ ಪ್ರಪಂಚದ ಶತ್ರುಗಳೆಂದು ಅವರು ಪರಿಗಣಿಸಲು ಕಾರಣವಾಗಿದೆ.

ಜಪಾನಿಯರು ಇಂದು ಯುದ್ಧವನ್ನು ನಡೆಯಿಸುತ್ತಿರುವದು, ಚೀನದಲ್ಲಿ ತಮ್ಮ ವ್ಯಾಪಾರದ ಹಕ್ಕುಗಳನ್ನು ಪ್ರಸ್ಥಾಪಿಸುವದಕ್ಕಾಗಿ, ಆರ್ಥಿಕ ಸುಲಿಗೆಯನ್ನು ಮಾಡುವದಕ್ಕಾಗಿ. ಅಂದಮೇಲೆ ಚೀನಿ ಜನಸಾಮಾನ್ಯರ ರೋಷವನ್ನೇಕೆ ಅವರು ಕಟ್ಟಿಕೊಳ್ಳುವರು? ಚೀನಿಯರು ಅನುಕೂಲರಾದರೇ ಅವರ ವ್ಯಾಪಾರ ನಡೆಯುವದಲ್ಲವೇ? ನಿರಪರಾಧಿಗಳನ್ನು ವ್ಯರ್ಥವಾಗಿ ಕೊಲ್ಲುವರೆಂಬುದು ವೃತ್ತಪತ್ರಿಕೆಗಳ ಪ್ರಚಾರದ ನೀತಿ.

ಸದ್ಯದ ಯುದ್ಧದಲ್ಲಿ ಬ್ರಿಟಿಶರು ಚೀನಾಕ್ಕೆ ಅಪ್ರತ್ಯಕ್ಷ ರೀತಿಯಿಂದ ಸಹಾಯ ಮಾಡುತ್ತಿರುವದರಿಂದ ಪ್ರತಿಯೊಬ್ಬ ಜಪಾನಿಯನಲ್ಲಿ ಬ್ರಿಟಿಶರ ವಿಷಯಕ್ಕೆ ದ್ವೇಷಭಾವನೆಯು ತುಂಬಿಕೊಂಡಿದೆ. ಬ್ರಿಟಿಶರ ಬಗ್ಗೆ ದ್ವೇಷವನ್ನು ಹುಟ್ಟಿಸುವ ಸಾರ್ವಜನಿಕ ಸಭೆಗಳೂ ಪ್ರಕಟನೆಗಳೂ ನಡೆಯುತ್ತಲೇ ಇವೆ. ಬ್ರಿಟಿಶರು ಶಾಂತಿಸಾಗರದಲ್ಲಿ ತಮ್ಮೊಡನೆ ಹೋರಾಡಲು ಅಸಮರ್ಥರೆಂದು ಜಪಾನಿಗಳಿಗೆ ಮನವರಿಕೆಯಾದುದರಿಂದ ಜಪಾನಿನ ಸೈನಿಕರು ನಿರ್ಭಯರಾಗಿ ಚೀನಾದಲ್ಲಿ ತಮ್ಮ ಕಾರ್ಯಸಾಧನೆಯನ್ನು ನಡೆಯಿಸಿರುವರು. ದಿನಾಲು ಸಾವಿರಾರು ಜನರು ಮರಣಕ್ಕೆ ಈಡಾಗುತ್ತಿದ್ದರೂ, ಬ್ರಿಟಿಶರು ಕಣ್ಣೆತ್ತಿ ಸಹ ನೋಡದೆ, ಇಬ್ಬರಿಗೂ ಯುದ್ಧ ಸಾಮುಗ್ರಿಗಳನ್ನು ಒದಗಿಸುತ್ತ ಹಣ ಗಳಿಸುವದರಲ್ಲಿಯೇ ಮಗ್ನರಾಗಿದ್ದಾರೆ. ನಿಜವಾಗಿಯೂ ಸ್ವಾತಂತ್ರ್ಯರಕ್ಷಣೆಯೇ ಬ್ರಿಟೀಶರ ಧ್ಯೇಯ-ಧೋರಣವಿದ್ದರೆ, ಜಪಾನಿಗೆ ಸಲ್ಲಿಸುವ ಯುದ್ಧ ಸಲಕರಣೆಗಳನ್ನು ನಿಲ್ಲಿಸಲಿ! ಬಹಿರಂಗವಾಗಿ ಇಂದು ಜಪಾನಿನ ವೈರವನ್ನು ಕಟ್ಟಿಕೊಳ್ಳಲು ಇಂಗ್ಲಿಷರು ಸಿದ್ಧರಿಲ್ಲ.

ನೆರೆಯ ರಾಜ್ಯಗಳಾದ ಚೀನಾ-ಜಪಾನಗಳು ಇಂದಿಲ್ಲ ನಾಳೆ ಸ್ನೇಹ ಸಂಬಂಧವನ್ನು ಬೆಳಿಸಲೇಬೇಕಾಗುವದು. 'ದೂರದ ಸ್ನೇಹಿತನಿಗಿಂತ ಹತ್ತಿರದ ಶತ್ರುವೇ ಮೇಲೆ'ಂಬ ಗಾದೆಯಂತೆ ಇಂದು ಜಪಾನಿನ ಬಗ್ಗೆ ಚೀನಿಯರಲ್ಲಿ ಎಷ್ಟೇ ರೋಷವಿರಲಿ,ಪ್ರಸಂಗ ಬಂದಾಗ ಜಪಾನಿಯರೇ ಚೀನಕ್ಕೆ ನೆರವಾಗು

ವವರು. ಸವಿಮಾತುಗಳನ್ನು ಸುರಿಸುವ ಪಾಶ್ಚಾತ್ಯರು ಎಂದೂ ನೆರವಾಗ ರೆಂಬುದನ್ನು ಮರೆಯಕೂಡದು. ಆದಷ್ಟು ಜಾಗ್ರತೆಯಾಗಿ ಚೀನಾ–ಜಪಾನ ಗಳಲ್ಲಿ ಸ್ನೇಹಸಂಬಂಧವುಂಟಾಗಿ ಏಶಿಯಾಖಂಡದಲ್ಲಿ ಏಶಿಯರ ಪ್ರಭುತ್ವವೇ ನೆಲೆಗೊಳ್ಳುವದೆಂದು ಆಶಿಸೋಣ. ಸಮಯ ಬಂದರೆ ಬ್ರಿಟಿಶರು ತಮ್ಮ ಕೋರಿಕೆಗಳಿಗಾಗಿ, ಚೀನವನ್ನು ನೀವು ನೋಡಿಕೊಳ್ಳಿರಿ, ಉಳಿದವುಗಳನ್ನು ನಾವು ನೋಡಿಕೊಳ್ಳುತ್ತೇವೆ, ಎಂಬ ಒಪ್ಪಂದವನ್ನೂ ಮಾಡಿಕೊಳ್ಳುವದೂ ಅಸಂಭವನೀಯವಲ್ಲ.



# ಜಪಾನರು ಆರ್ಥಿಕ ದೃಷ್ಟಿಯಿಂದ

# ಎಷ್ಟು ವರ್ಷ ಯುದ್ಧ ನಡೆಸಬಲ್ಲರು ?



ನಾಗರಿಕ ತತ್ವಕ್ಕೆ ತವರುಮನೆಯಾದ, ಶಾಂತಿಗೆ ನೆಲೆಬೀಡಾದ, ಈ ನಮ್ಮ ಏಶಿಯಾಖಂಡದಲ್ಲಿ ಕಳೆದ ಒಂದು ವರ್ಷದಿಂದಲೂ ಮುಂದುವರಿಯುತ್ತಿರುವ, ಚೀನಾ-ಜಪಾನೀಯರ ಯುದ್ಧವು, ನಮ್ಮ ಕರ್ಣಾಟಕರಿಗೆ, ತಿಳಿದ ವಿಷಯವಾಗಿಯೇ ಇದೆ. ಬೌದ್ಧಧರ್ಮದ ಅನುಯಾಯಿಗಳೂ, ಅಹಿಂಸೆಯ ಉಪಾಸಕರೂ ಆದ ಈ ಜನಾಂಗಗಳು, ಶಾಂತಿಯ ಹೆಸರಿನಲ್ಲಿ, ದೇಶಪ್ರೇಮದ ಸಡಗರದಲ್ಲಿ, ಲಕ್ಷಾಂತರ ಪವಿತ್ರವಾದ ಮಾನವರ ಕೊಲೆಗೆ ತೊಡಗಿರುವದನ್ನು ನೋಡಿದರೆ, ಯಾರಿಗೆ ತಾನೇ ದುಃಖವಾಗದೆ ಇದ್ದೀತು? ಸದ್ಯಕ್ಕೆ, ಜಪಾನರು ನಡೆಸುತ್ತಿರುವ ಈ ಯುದ್ಧವು, ನ್ಯಾಯವೇ, ಅನ್ಯಾಯವೇ, ಸಾಧುವೇ, ಅಸಾಧುವೇ, ಮಾನುಷ್ಯತ್ವವೇ, ಅಮಾನುಷ್ಯತ್ವವೇ ಎಂಬ ವಿಮರ್ಶೆಗೆ ಹೋಗದೆ, ಬರೀ ಆರ್ಥಿಕ ದೃಷ್ಟಿಯಿಂದ, ಇವರ ಸ್ಥಿತಿಯು ಯಾವ ರೀತಿಯಲ್ಲಿ ಇರುವುದು, ಅದು ಮುಂದುವರಿದು ಹ್ಯಾಗೆ, ಎಷ್ಟರ ಮಟ್ಟಿಗಿನ ಯುದ್ಧದ ಖರ್ಚನ್ನು ಸಹಿಸಬಲ್ಲುದು, ಯುದ್ಧವು ನಾಲ್ಕಾರು ವರ್ಷಗಳು ನಡೆದರೆ, ಆಗ, ಇವರ ಸ್ಥಿತಿಯು ಏನಾಗುವುದು ಎಂಬ ವಿಷಯಗಳಷ್ಟನ್ನು ಮಾತ್ರ ವಿಮರ್ಶಿಸುವುದೇ, ಈ ಪ್ರಕರಣದ ಮುಖ್ಯ ಗುರಿಯಾಗಿದೆ.

ಈಗಿನ ನವಯುಗದಲ್ಲಿ, ಯುದ್ಧದಲ್ಲಿ ಜಯಶಾಲಿಗಳಾಗಬೇಕಾದರೆ, ಭದ್ರವಾದ ಆರ್ಥಿಕ ಸ್ಥಿತಿಯೂ, ದೇಶಾಭಿಮಾನಿಗಳಾದ ಜನಬಲವೂ, ಭೂಗೋಳ ಭೂಮಿಯ ವಸತಿಯ (Geographical Position) ಅನುಕೂಲತೆಯೂ ಇವುಗಳಿಂದ, ಅಲ್ಲದೆ ಬೇರೆ ಇಲ್ಲ. ದೈವವಶಾತ್, ಈ ಮೂರು ಅನುಕೂಲಗಳೂ, ಜಪಾನಿಯರಿಗೆ ದೊರೆತಿರುವವು. ಈ ಅನುಕೂಲಗಳು,

ಸನ್ ೧೮೯೪ರಲ್ಲಿ ನಡೆದ ಮೊದಲನೆಯ ಚೀನಾ-ಜಪಾನ್ ಯುದ್ಧದಲ್ಲಿಯೂ ಸನ್ ೧೯೦೪ರಲ್ಲಿ ನಡೆದ ರಷ್ಯಾ-ಜಪಾನ್ ಯುದ್ಧದಲ್ಲಿಯೂ ಇವರಿಗೆ ಬೆಂಬಲವಾಗಿ ನಿಂತು ಜಯಲಕ್ಷ್ಮಿಯನ್ನು ಒಲಿಸಲು ಸಹಾಯಮಾಡಿದುವು. ಆದರೆ, ಈ ಯುದ್ಧದಲ್ಲಿ, ಇವರಿಗೆ ಜಯವು ಸಾಧ್ಯವೇ, ಸಾಧ್ಯವಾಗುವ ಪಕ್ಷಕ್ಕೆ ಅದು ಯಾತರ ಬಲದಿಂದ? ಜನಬಲವಾದರೋ ಮೊದಲಿನಂತೆ ಅಚ್ಚಳಿಯದೆ ಇರುವುದು. ಈಗಾಗಲೇ, ಕನಿಷ್ಠ ಪಕ್ಷ, ಎರಡು ಲಕ್ಷ ಜಪಾನೀ ಸೈನಿಕರು ಯುದ್ಧದಲ್ಲಿ ಮಡಿದರೂ, ಇನ್ನೂ ಲಕ್ಷಾಂತರ ಸೈನಿಕರು ಅಪ್ಪಣೆಯನ್ನು ಸ್ವೀಕರಿಸಲು ಸಿದ್ಧರಿರುವರು. ಈ ದೇಶದಲ್ಲಿ ಕಡ್ಡಾಯವಾದ ಸೈನಿಕ ಶಿಕ್ಷಣವಿರುವದರಿಂದ, ಸೈನಿಕರಿಗೇನೂ ಕಡಿಮೆಯಿಲ್ಲ. ಅಲ್ಲದೆ, ಇವರ ಸ್ವದೇಶಾಭಿಮಾನವು ಕೂಡ, ಇತರ ಯಾವ ಜನಾಂಗಗಳಿಗಿಂತಲೂ, ಕಡಿಮೆಯೇನೂ ಅಲ್ಲ. ಮತ್ತೆ ಭೂಗೋಳವಲ್ಲಿ ಭೂಮಿಯ ಅನುಕೂಲವು ಇವರಿಗೇ ನೆರವಾಗಿರುವುದು. ಸೈನಿಕರನ್ನೂ, ಯುದ್ಧದ ಸಾಮಗ್ರಿಗಳನ್ನೂ ಇವರು, ಎರಡು ದಿನಗಳಲ್ಲಿ, ಚೀನಾದೇಶಕ್ಕೆ ಸಾಗಿಸಬಲ್ಲರು; ಇತರ ದೇಶಗಳಿಗಾದರೋ, ತಿಂಗಳುಗಟ್ಟಲೆ ಹಿಡಿಯುವುದು.

## ಮೊದಲನೆ ಚೀನಾ-ಜಪಾನ್ ಯುದ್ಧ ಸನ್ ೧೮೯೪

ಸನ್ ೧೮೯೪ನೇ ಜೂನ್ ತಿಂಗಳಲ್ಲಿ ಪ್ರಾರಂಭವಾದ ಚೀನಾ-ಜಪಾನೀಯರ ಯುದ್ಧವು, ಸನ್ ೧೮೯೫ರ ಮಾರ್ಚಿ ತಿಂಗಳ ಹೊತ್ತಿಗೆ, ಮುಕ್ತಾಯವಾಯಿತು. ಈ ಯುದ್ಧದಲ್ಲಿ, ಜಪಾನೀಯರಿಗೆ ಜಯವು ಲಭಿಸಿ, ತಯವಾನ್ ಎಂಬ ದೊಡ್ಡ ದ್ವೀಪವು ಇವರ ವಶಕ್ಕೆ ಬಂದಿತು. ಯುದ್ಧದ ಖರ್ಚು ಆದರೋ ಇಪ್ಪತ್ತು ಕೋಟಿ ಎನ್ನುಗಳನ್ನು ಮುಟ್ಟಿತು. (ಸದ್ಯಕ್ಕೆ, ಒಂದು ಯೆನ್ ನಾಣ್ಯಕ್ಕೆ, ೧೨ ಆಣೆಯ ಬೆಲೆಯುಂಟು; ಆಗಿನ ಕಾಲದಲ್ಲಿ ಒಂದು ಯೆನ್ನಿಗೆ ೧। ರೂಪಾಯಿಯ ಬೆಲೆಯಿದ್ದಿತು.) ಈ ವರ್ಷದ ಖರ್ಚಿನಲ್ಲಿ, ಶೇಕಡಾ ೬೦ರಷ್ಟರ ಭಾಗವನ್ನು, ಸ್ವದೇಶದಲ್ಲಿ, ಸಾಲದ ರೂಪವಾಗಿ, ಗಳಿಸಲಾಗಿತ್ತು. ಕಂದಾಯವನ್ನು ಹೇರದೆ, ಮೊದಲಿನಂತೆ ಇದ್ದಿತು. ೪೦ ವರ್ಷಗಳ ಹಿಂದೆ ಜಪಾನ್ ಅಷ್ಟು ಮುಂದುವರಿದ ದೇಶವಾಗಿರಲಿಲ್ಲ. ಅದರ ಕೈಗಾರಿಕೆಯು ಬಾಲ್ಯಾವಸ್ಥೆಯಲ್ಲಿ ಇದ್ದಿತು. ಅಂದ ಮೇಲೆ ಇಪ್ಪತ್ತು

ಕೋಟಿ ಎನ್ನು ಯುದ್ಧದಿಂದ ನಷ್ಟವಾದ್ದರಿಂದ, ತಯಾರಾಗುತ್ತಿದ್ದ ರೇಲ್ವೆಯ ನಿರ್ಮಾಣವನ್ನು ಸರಕಾರವು ಕೈಬಿಟ್ಟಿತು. ಅಂತೂ ಒಟ್ಟಿನಲ್ಲಿ, ಮೊದಲನೆಯ ಚೀನಾ–ಜಪಾನ್ ಯುದ್ಧವು, ಹಣಕಾಸಿನ ತೊಂದರೆ ಇಲ್ಲದೆ, ಮುಕ್ತಾಯ ವಾಯಿತು.

## ರಷ್ಯಾ–ಜಪಾನ್ ಯುದ್ಧ (ಸನ್ ೧೯೦೪)

ಸನ್ ೧೯೦೪ನೆಯ ಫೆಬ್ರುವರಿ ತಿಂಗಳಲ್ಲಿ ಪ್ರಾರಂಭವಾದ, ರಷ್ಯಾ–ಜಪಾನೀಯರ ಯುದ್ಧವು, ಸನ್ ೧೯೦೫ರ ಮೇ ತಿಂಗಳ ಹೊತ್ತಿಗೆ ಮುಕ್ತಾಯವಾಯಿತು. ಯುದ್ಧದಲ್ಲಿ, ಜಪಾನಿಯರಿಗೆ, ಜಯವು ದೊರೆತು ಜಪಾನಿನಷ್ಟೇ ವಿಸ್ತಾರವಾದ, ಕೋರಿಯಾದೇಶವು, ಇವರ ಸ್ವಾಧೀನ ವಾದುದೂ ಅಲ್ಲದೆ, ಮಂಚೂರಿಯ ದೇಶದಲ್ಲಿಯೂ, ಇವರಿಗೆ, ಕೆಲವು ಅನುಕೂಲಗಳು ದೊರೆತವು. ಆ ಹದಿನಾರು ತಿಂಗಳ ಯುದ್ಧಕಾಲದಲ್ಲಿ, ಹತ್ತುಲಕ್ಷ ಜಪಾನ್ ಸೈನಿಕರು, ಯುದ್ಧದಲ್ಲಿ ಭಾಗವಹಿಸಿದರು; ಅಲ್ಲದೆ ೧೫೦ ಕೋಟಿ ಎನ್ನುಗಳನ್ನು ಕೂಡ ವ್ಯಯಮಾಡಿದರು. ಮೊದಲಿನ ಚೀನಾ ಜಪಾನ ಯುದ್ಧವನ್ನು ರಷ್ಯಾ-ಜಪಾನ ಯುದ್ಧಕ್ಕೆ ಹೋಲಿಸಿದರೆ, ಯುದ್ಧದ ಕಾಲವು ಎರಡರಷ್ಟು ಆಗುವದಲ್ಲದೆ, ಸೈನಿಕರ ಸಂಖ್ಯೆಯೂ ಐದರಷ್ಟು ಆಗುವುದು; ಮತ್ತು ಖರ್ಚು ಆದರೋ, ಏಳು ಎಂಟರಷ್ಟು ಆಗುವುದು.

ಈ ಒಟ್ಟು ೧೫೦ ಕೋಟಿ ಎನ್ನುಗಳಲ್ಲಿ ಶೇಕಡಾ ೧೮ರಷ್ಟು, ಹೆಚ್ಚಿನ ಕಂದಾಯದಿಂದ ವಸೂಲು ಮಾಡಲಾಯಿತು. ಉಳಿದ ೭೦ರಷ್ಟು ಭಾಗವು ಸ್ವದೇಶ ಮತ್ತು ಪರದೇಶಗಳ ಸಾಲದಿಂದ ಕೂಡಿಸಲಾಯಿತು. ಇಂಗ್ಲಂಡ ಮತ್ತು ಅಮೇರಿಕಾ ದೇಶಗಳು, ತಮಗೂ ವೈರಿಯಾದ ರಷ್ಯವನ್ನು ನಾಶ ಮಾಡಲು, ಮೇಲ್ಕಂಡ ಯುದ್ಧದ ಕಾಲದಲ್ಲಿ, ಜಪಾನಿಗೆ ನೂರು ಕೋಟಿ ಎನ್ನುಗಳ ಸಾಲವನ್ನು ಕೊಟ್ಟವು.

ಯುದ್ಧದ ಕಾಲದಲ್ಲಿ ಪ್ರಜಗಳು ೧೩ ಕೋಟಿ ಹೆಚ್ಚಿನ ಕಂದಾಯವನ್ನು ತೆತ್ತರು. ಚಲಾವಣೆಯಲ್ಲಿ ಇದ್ದ ಕಾಗದ ನಾಣ್ಯವು ೨೩ ಕೋಟಿ ಎನ್ನು

ಗಳು ಮತ್ತು ಬ್ಯಾಂಕಿನ ಠೇವಣಿಯಾದರೋ, ೬೫ ಕೋಟಿ ಎನ್ನುಗಳಷ್ಟು ಇದ್ದಿತು. ಇಂಥಾ ಸ್ಥಿತಿಯಲ್ಲಿ, ೪೮ ಕೋಟಿ ಎನ್ನುಗಳ ಸ್ವದೇಶಿ ಬಾಂಡ್‌ಗಳು ಸೇರಿ, ಸ್ಥಿತಿಯನ್ನು ಸ್ವಲ್ಪ ಕೆಡಿಸಿತು. ರಷ್ಯಾ-ಜಪಾನ ಯುದ್ಧವು ಮುಗಿಯುವ ಹೊತ್ತಿಗೆ, ದೇಶದಲ್ಲಿ ಕಾಗದದ ಹಣದ ಚಲಾವಣೆಯೂ, ಶೇಕಡ ೩೫ರಷ್ಟೂ ಹೆಚ್ಚಿದ್ದೂ ಅಲ್ಲದೆ, ಪದಾರ್ಥಗಳ ಕ್ರಯವೂ ಕೂಡ, ಶೇಕಡ ೩೦ರಷ್ಟು ಏರಿತ್ತು. ಪರದೇಶದ ವ್ಯಾಪಾರವೂ ಕೂಡ, ನಷ್ಟರೂಪವಾಗಿ ಪರಿಣಮಿಸಿತ್ತು. ಆದರೆ, ಪರದೇಶದ ಸಾಲವು ದೊರೆತದ್ದರಿಂದ, ಆ ಕಷ್ಟವನ್ನು ಸುಧಾರಿಸಲಾಯಿತು. ಅಂತೂ ರಷ್ಯಾ-ಜಪಾನ ಯುದ್ಧವು, ಹೆಚ್ಚು ಹಣಕಾಸಿನ ಮುಗ್ಗಟ್ಟು ಇಲ್ಲದೆ, ಜಪಾನಿಗೆ ಜಯವನ್ನು ಒದಗಿಸಿಕೊಟ್ಟಿತು.

## ಸದ್ಯದ ಆರ್ಥಿಕ ಸ್ಥಿತಿ

ಇವರುಗಳು ನಡೆಸಿದ ಎರಡೂ ಪರದೇಶದ ಯುದ್ಧವನ್ನು ನೋಡಿದರೆ ಸದ್ಯದ ಯುದ್ಧಕ್ಕೆ, ಯಾವ ಅಡಚಣೆಯೂ ಇಲ್ಲದೆ, ವರ್ಷಕ್ಕೆ ಸರಾಸರಿಯಾಗಿ ಒಂದು ಸಾವಿರ ಕೋಟಿ ಎನ್ನುಗಳನ್ನು ಖರ್ಚುಮಾಡುವ ಸ್ಥಿತಿಯಲ್ಲಿ ಇರುವರು, ಎಂಬ ಸಂಗತಿಯು ಗೊತ್ತಾಗುವುದು.

ಕೆಳಗಿನ ಅಂಕಿಗಳಿಂದ, ಇವರ ಆರ್ಥಿಕ ಸ್ಥಿತಿಯು, ಹಿಂದೆ ನಡೆದ ಯುದ್ಧದ ಆರ್ಥಿಕ ಸ್ಥಿತಿಗಿಂತ, ಯಾವ ರೀತಿಯಿಂದ ಉತ್ತಮವಾಗಿದೆ ಎಂಬ ಅಂಶವು ಗೊತ್ತಾಗುತ್ತದೆ.

### ಬೇರೆ ಬೇರೆ ಯುದ್ಧ ಕಾಲಗಳ ಆರ್ಥಿಕ ವಿದ್ಯಮಾನಗಳ ಪಟ್ಟಿ
(ಪ್ರತಿಯೊಂದು ಸಾವಿರ ಎನ್ನುಗಳಲ್ಲಿ)

| | ೧೮೯೪ ಚೀನಾಯುದ್ಧ | ೧೯೦೪ ರಷ್ಯದ ಯುದ್ಧ | ೧೯೩೭ ಸದ್ಯದ ಯುದ್ಧ |
|---|---|---|---|
| ಕರೆನ್ಸಿ ನೋಟು ಹೊರಡಿಸಿದ್ದು | ೧೨೯೬೩೨ | ೨೦೧೮೪೮ | ೧೩೩೯೯೪೫ |
| ರೊಕ್ಕದ ಬಳಿಕೆ | ೮೫೯೨೦ | ೧೧೬೯೭೨ | ೧೪೨೫೦೦೦ |
| ಬ್ಯಾಂಕಿನ ಠೇವಣಾತಿ | ೧೧೧೪೬೯ | ೬೫೧೪೨೮ | ೧೩೯೭೮೦೦೦ |
| ತೆತ್ತುಬಂದ ಸಮ್ಮಿಳಿತ ಭಂಡವಾಳ | ೨೪೯೬೭೩ | ೮೮೬೭೦೭ | ೧೭೬೨೭೭೭೬ |
| ವಿದೇಶೀ ವ್ಯಾಪಾರದ ಪರಿಮಾಣ | ೭೬೬೯೬೦ | ೭೦೭೭೩೮ | ೫೬೨೫೮೬೩ |
| ಉಳಿಕೆ ಮತ್ತು ಖರ್ಚು | ೧೯೬೩೫೧ | ೫೦೯೮೧೭ | ೪೭೧೬೦೯೧ |

ಮೇಲಿನ ಅಂಕೆಗಳನ್ನು ಪರಿಶೀಲಿಸಿದರೆ, ಇವರ ಸದ್ಯದ ಆರ್ಥಿಕ ಸ್ಥಿತಿಯೂ, ರಷ್ಯ ಯುದ್ಧದ ಕಾಲಕ್ಕಿಂತಲೂ, ೮-೧೦ ಪಾಲಿನಷ್ಟು ಉತ್ತಮ ವಾಗಿರುತ್ತದೆ ಎಂದು ಗೊತ್ತಾಗುತ್ತದೆ.

ಜಪಾನು, ವರ್ಷಕ್ಕೆ ಎರಡು ಸಾವಿರ ಕೋಟಿ ಎನ್ನುಗಳನ್ನು ಖರ್ಚು ಮಾಡಬಲ್ಲದು:—

ಯುದ್ಧವು ಪ್ರಾರಂಭವಾದಾಗ್ಗೆ ಮೊದಲು ದೇಶದಲ್ಲಿ ಕೂಡಿಟ್ಟ ಹಣ (National savings) ವನ್ನು, ಮೊದಲು ಉಪಯೋಗಿಸಬೇಕು; ಅದರ ಜೊತೆಗೆ ದೇಶದ ಸಂಪಾದನೆಯನ್ನು ಬಿಗಿಮಾಡಿ ದಂಡು ಕಟ್ಟಬೇಕು; ಇವೆರಡರ ಮುಖಾಂತರ, ದೊರೆಯುವ ಹಣವು, ಬರಿದಾದ ಮೇಲೆಯೇ, ದೇಶದ ಸಾರ್ವಜನಿಕ ಆಸ್ತಿಯನ್ನು (National wealth) ಉಪಯೋಗಿಸ ಬೇಕು ಎಂದು ಯೋಚಿಸಲಾಯಿತು. ಉಪಯೋಗಿಸುವುದರಲ್ಲಿ, ಬಹು ಜಾಣತನವನ್ನು ತೋರಿಸದೆ ಇದ್ದರೆ, ಹಣಕಾಸಿನ ಸ್ಥಿತಿಯು ಕೆಟ್ಟು, ಯುದ್ಧ ವನ್ನು ಸಾಗಿಸಲು ಸಾಧ್ಯವಿಲ್ಲದೆ, ಅಪಜಯವನ್ನು ಅಪ್ಪಿಕೊಳ್ಳಬೇಕಾಗು ತ್ತದೆ ಎಂಬುದು ನಿಜ.

ಇಂಗ್ಲಂಡಿನ ಪ್ರಸಿದ್ಧ ಅರ್ಥಶಾಸ್ತ್ರಜ್ಞನ ದೃಷ್ಟಿಯಿಂದ ಇಂಗ್ಲಂಡ ದೇಶದಲ್ಲಿ, ಪ್ರಪಂಚದ ಯುದ್ಧಕ್ಕೆ ಮೊದಲು, ಸಾವಿರದ ಆರುನೂರು ಕೋಟಿ ಪೌಂಡುಗಳಷ್ಟು ದೇಶದ ಆಸ್ತಿ (National wealth) ಯು ಇದ್ದಿತು. ಆದರೆ ನಾಲ್ಕು ವರ್ಷಗಳ ಯುದ್ಧದ ನಂತರ, ಮೇಲ್ಕಂಡ ಆಸ್ತಿಯೂ, ಸಾವಿರದ ಮುನ್ನೂರ ನಲ್ವತ್ತು ಕೋಟಿ ಪೌಂಡಿನಷ್ಟು ಆಯಿತು. ಅಂದರೆ, ಶೇಕಡ ೧೬ರಷ್ಟು ಆಸ್ತಿಯು ಕಡಿಮೆಯಾದಂತೆ ಆಯಿತು. ಜರ್ಮನಿಯಲ್ಲಿ ಕೂಡ ಇದು ಯುದ್ಧದ ಪೂರ್ವ ಮೂವತ್ತೇಳು ಸಾವಿರ ಕೋಟಿ ಮಾರ್ಕ್ (Mark) ನಷ್ಟು ಇದ್ದಿತು. ಆದರೆ ಯುದ್ಧದ ಅಂತ್ಯಭಾಗದಲ್ಲಿ, ಈ ಮೊತ್ತವು ೨೫ ಸಾವಿರ ಕೋಟಿ ಮಾರ್ಕಿಗೆ ಇಳಿಯಿತು. ಒಟ್ಟಿನಲ್ಲಿ ಜರ್ಮನಿಯ ಆಸ್ತಿಯು ಶೇಕಡ ೩೨ರಷ್ಟು ಯುದ್ಧದಲ್ಲಿ ನಾಶವಾಯಿತು. ಈ ರೀತಿ ಶೇಕಡ ೩೧ರಷ್ಟು ಹಣಕಾಸಿನ ಸ್ಥಿತಿಯು ಕೆಟ್ಟಿದ್ದರಿಂದಲೇ, ಜರ್ಮನಿಗೆ ಅಪಜಯವಾಯಿತು ಎಂಬುದರಲ್ಲಿ ಆಶ್ಚರ್ಯವೇನೂ ಇಲ್ಲ.

ಪ್ರಪಂಚದ ಯುದ್ಧದಲ್ಲಿ ಭಾಗವಹಿಸಿದ ದೇಶಗಳೆಲ್ಲವು, ಸರಾಸರಿ ಶೇಕಡ ೪೪ ಭಾಗದಷ್ಟು ದೇಶದ ಆಸ್ತಿಯನ್ನು ಯುದ್ಧದಲ್ಲಿ ಆಹುತಿಕೊಟ್ಟವೆಂಬುದು ಕೆಳಗಿನ ಅಂಕಿಗಳನ್ನು ಪರಿಶೀಲಿಸಿದರೆ ಗೊತ್ತಾಗುವದು.

| | ದೇಶದ ಆಸ್ತಿ | ಯುದ್ಧದ ಜುಮ್ಲಾ ಖರ್ಚು | ದಾಮಾಶಾಯಿ |
|---|---|---|---|
| ಬ್ರಿಟನ್—ಪೌಂಡುಗಳು | ೧೬೦೦೦೦೦೦೦೦೦೦ | ೭೪೬೩೭೬೯೦೦೦ | ೪೬.೬% |
| ಫ್ರಾನ್ಸ್—ಫ್ರಾಂಕುಗಳು | ೨೫೬೫೦೦೦೦೦೦೦೦ | ೧೪೮೨೪೯೫೪೪೦೦೦ | ೫೫% |
| ಇಟಲಿ—ಲಯರುಗಳು | ೧೦೦೦೦೦೦೦೦೦೦೦ | ೪೧೮೫೨೦೮೦೦೦೦ | ೪೧% |
| ರಶ್ಯಾ—ರೂಬಲುಗಳು | ೧೨೦೦೦೦೦೦೦೦೦೦ | ೫೪೮೯೮೫೦೦೦೦೦ | ೪೫% |
| ಜರ್ಮನಿ—ಮಾರ್ಕುಗಳು | ೩೧೦೦೦೦೦೦೦೦೦೦ | ೧೩೯೩೪೨೩೪೨೦೦೦ | ೪೪% |
| ಆಸ್ಟ್ರಿಯಾ-ಹಂಗೇರಿ ಕ್ರೊನೆನ್ | ೨೭೫೦೦೦೦೦೦೦೦೦ | ೮೪೪೩೪೦೦೦೦೦ | ೩೭% |

ಸನ್ ೧೯೩೦ನೇ ಇಸ್ವಿಯ ಅಂಕಿಗಳಂತೆ, ಜಪಾನಿನ ಆಸ್ತಿಯು (National wealth) ಹನ್ನೊಂದು ಸಾವಿರ ಕೋಟಿ ಎನ್ನುಗಳ ವರೆಗೆ ಮುಟ್ಟಿತ್ತು. ಆದರೆ ಈಚೆಗೆ ನಡೆದ ಕೈಗಾರಿಕೆ, ವ್ಯಾಪಾರಗಳ ಅಭಿವೃದ್ಧಿಯನ್ನು ನೋಡಿದರೆ ಮೇಲ್ಕಂಡ ಅಂಕಿಯು ಕನಿಷ್ಟಪಕ್ಷ ಹನ್ನೆರಡು ಸಾವಿರ ಕೋಟಿ ಎನ್ನುಗಳಷ್ಟಾದರೂ ಆಗಿರಬಹುದೆಂದು ಊಹಿಸುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಕೊನೆಯ ಅಂಕಿಯನ್ನು ಸ್ವೀಕರಿಸುವದಾದರೆ. ಶೇಕಡ ೪೪ರ ಭಾಗವನ್ನು (೫ ಸಾವಿರ ೨೮೦ ಕೋಟಿ ಎನ್ನು) ಯುದ್ಧದ ನಾಲ್ಕು ವರ್ಷಗಳ ಕಾಲದಲ್ಲಿ ಉಪಯೋಗಿಸಬಹುದು. ಅಂದರೆ, ಪ್ರತಿವರ್ಷವೂ ಒಂದು ಸಾವಿರದ ಮುನ್ನೂರು ಕೋಟಿ ಎನ್ನುಗಳಿಂದ ಯುದ್ಧವನ್ನು ನಡೆಸಲು ಸಾಧ್ಯವಾಗುವುದು.

ದೇಶದ ಸಂಪಾದನೆಯಲ್ಲಿ (Notional earnings) ಘೋರ ಯುದ್ಧಕಾಲದಲ್ಲಿ ಭಾಗವಹಿಸಿದ್ದ ದೇಶಗಳೆಲ್ಲವೂ ಶೇಕಡ ೮೬.೯ರಷ್ಟು ಯುದ್ಧಕ್ಕಾಗಿ ವ್ಯಯಮಾಡಿದವು.

| | ವಾರ್ಷಿಕ ಉತ್ಪನ್ನ | ವಾ. ಯುದ್ಧದ ಖ. | ದಾಮಾಶಾಯಿ |
|---|---|---|---|
| ಬ್ರಿಟನ್—ಪೌಂಡುಗಳು | ೨೩೦೦೦೦೦೦೦೦ | ೧೭೫೬೧೭೬೦೦೦ | ೭೬.೪% |
| ಫ್ರಾನ್ಸ್—ಫ್ರಾಂಕುಗಳು | ೩೭೦೦೦೦೦೦೦೦ | ೩೨೫೪೮೭೬೦೦೦೦ | ೯೦% |
| ಇಟಲಿ—ಲಯರುಗಳು | ೧೧೦೦೦೦೦೦೦೦೦ | ೭೫೦೩೨೬೬೦೦೦ | ೯೫% |
| ರಷ್ಯ—ರೂಬಲುಗಳು | ೧೫೦೦೦೦೦೦೦೦೦೦ | ೧೩೫೨೭೧೫೦೦೦೦ | ೯೦% |
| ಜರ್ಮನಿ—ಮಾರ್ಕುಗಳು | ೪೦೦೦೦೦೦೦೦೦ | ೩೪೧೪೪೭೮೭೦೦೦ | ೮೫% |
| ಆಸ್ಟ್ರಿಯಾ-ಹಂಗೇರಿ ಕ್ರೊನೆನ್ | ೨೫೦೦೦೦೦೦೦೦೦ | ೧೮೧೭೮೧೬೦೦೦೦ | ೭೨% |

ಸನ್ ೧೯೩೦ರಲ್ಲಿ ಜಪಾನಿನ ಸಂಪಾದಿಸುವಿಕೆಯು, ೧೦೬೦ ಕೋಟಿ ಎನ್ನುಗಳಷ್ಟು ಇದ್ದಿತು. ಆದರೆ ಸದ್ಯಕ್ಕೆ ಅದೇ ಮೊತ್ತವು ಕನಿಷ್ಟ ಪಕ್ಷ ೧೪೦೦ ಕೋಟಿ ಎನ್ನುಗಳ ವರೆಗೆ ಏರಿರುವುದರಲ್ಲಿ ಯಾವ ಸಂಶಯವೂ ಇಲ್ಲ. ಮತ್ತೆ ಕೆಲವು ವಿಶ್ವವಿದ್ಯಾನಿಲಯದ ಮತ್ತು ವಾಣಿಜ್ಯ ಅಧಿಕಾರಿಗಳು ಈ ಅಂಕಿಯು ೨೦೦೦ ಕೋಟಿ ಎನ್ನುಗಳಷ್ಟು ಇದೆಯೆಂದೂ ಗೊತ್ತುಮಾಡಿರುವರು. ಈ ಅಂಕಿಯ ಪ್ರಕಾರ ಶೇಕಡಾ ೮೬.೬ರಷ್ಟು ಭಾಗವನ್ನು ಯುದ್ಧಕ್ಕೆ ಖರ್ಚುಮಾಡಿದುದೇ ಆದರೆ, ಯಾವ ತೊಂದರೆಯೂ ಆಗಲಾರದು.

ಇನ್ನೂ ದೇಶದ ಉಳಿತಾಯ (Savings) ವನ್ನು ನೋಡಿದರೆ, ಇಟಲಿ ದೇಶವು ಯುದ್ಧಕಾಲದಲ್ಲಿ ತನ್ನ ಉಳಿತಾಯಕ್ಕಿಂತ ಹತ್ತುಪಾಲಿನಷ್ಟು ಖರ್ಚು ಮಾಡಿರುವುದನ್ನು ನೋಡಬಹುದು. ಇದರಂತೆಯೇ ಇತರ ಯುರೋಪಿನ ದೇಶಗಳೂ, ತಮ್ಮ ಉಳಿತಾಯಕ್ಕಿಂತ ೪-೫ ಪಾಲಿನಷ್ಟು ಯುದ್ಧದಲ್ಲಿ ವ್ಯಯಮಾಡಿರುವುದನ್ನು ಕಾಣಬಹುದು.

| | ವಾರ್ಷಿಕ ಉಳಿತಾಯ | ವಾ. ಯು. ಉ. | ಪಾಮಾಶಾಯಿ |
|---|---|---|---|
| ಬ್ರಿಟನ್—ಪೌಂಡುಗಳು | ೩೭೦೦೦೦೦೦ | ೧೭೫೬೧೭೬೦೦೦ | ೪೬.೮% |
| ಫ್ರಾನ್ಸ್—ಫ್ರಾಂಕುಗಳು | ೬೦೦೦೦೦೦೦೦೦ | ೩೨೫೪೮೭೬೦೦೦೦ | ೫೫.೯% |
| ಇಟಲಿ—ಲಯರುಗಳು | ೧೮೦೦೦೦೦೦೦೦ | ೧೦೪೬೩೦೦೦೦೦೦ | ೯೮.೧% |
| ಜರ್ಮನಿ—ಮಾರ್ಕುಗಳು | ೨೫೦೦೦೦೦೦೦೦ | ೧೩೫೨೭೧೫೦೦೦೦ | ೫೮.೧% |
| ರಷ್ಯಾ—ರೂಬಲುಗಳು | ೬೫೦೦೦೦೦೦೦೦ | ೩೪೧೪೪೭೮೯೦೦೦ | ೫೨.೫% |
| ಆಸ್ಟ್ರಿಯಾ-ಹಂಗೇರಿ ಕ್ರೊನೆನ್ | ೪೦೦೦೦೦೦೦೦೦ | ೧೮೦೦೦೧೬೦೦೦೦ | ೪೫.೪% |

ಸದ್ಯಕ್ಕೆ, ಜಪಾನಿನಲ್ಲಿ ವರ್ಷದ ಉಳಿತಾಯದ ವಿಷಯದಲ್ಲಿ ಅಧಿಕಾರ

ಯುತವಾದ ಪ್ರಕಟನೆಯೂ ಇರುವುದಿಲ್ಲ. ಆದರೆ, ಪ್ರೊಫೆಸರ್ ಹಿಜಿಕಕರ ಅವರು, ವರ್ಷದ ಸಂಪಾದಿಸುವಿಕೆಯಲ್ಲಿ ಶೇಕಡ ೧೫ರಷ್ಟನ್ನು ಸೇರಿಸಿ, ಉಳಿತಾಯವು ೬೦೦ ಕೋಟಿ ಎನ್ನುಗಳು ಆಗುತ್ತದೆ ಎಂದು ಗೊತ್ತು ಮಾಡಿರುವರು. ಇದನ್ನು ಆಧಾರವಾಗಿ ಇಟ್ಟುಕೊಳ್ಳುವುದಾದರೆ, ಜಪಾನು ವರ್ಷಕ್ಕೆ ೧೬೦೦ ಕೋಟಿ ಎನ್ನುಗಳನ್ನು ಯುದ್ಧಕ್ಕೆ ಉಪಯೋಗಿಸಲು ಶಕ್ತವಿದೆ ಎಂದು ಗೊತ್ತಾಗುತ್ತದೆ. ಅಥವಾ ಉಳಿತಾಯಕ್ಕಿಂತ ೫ ಪಾಲಿ ನಷ್ಟು ಅದು ಆಗುತ್ತದೆ.

ಘೋರ ಯುದ್ಧದಂತೆ ಈ ಯುದ್ಧವೂ ನಡೆದುದೇ ಆದರೆ, ಜಪಾನು ತನ್ನ ಆಸ್ತಿ, ಸ್ಥಿತಿಯಿಂದ ವರ್ಷಕ್ಕೆ ೧೩೦೦ ಕೋಟಿ ಎನ್ನುಗಳನ್ನು ಖರ್ಚು ಮಾಡಬಲ್ಲದು; ವರ್ಷದ ಸಂಪಾದಿಸುವಿಕೆಯಿಂದ, ಮತ್ತೆ ಒಂದು ಸಾವಿರದ ಇನ್ನೂರು ಕೋಟಿ ಎನ್ನುಗಳನ್ನು ಖರ್ಚು ಮಾಡಬಲ್ಲದು; ಅಲ್ಲದೆ, ಹಣದ ಉಳಿತಾಯದಿಂದ, ಮತ್ತೆ ೧೧೫೦ ಕೋಟಿ ಎನ್ನುಗಳನ್ನು ಖರ್ಚುಮಾಡ ಬಲ್ಲದು. ಅಂತೂ, ಸರಾಸರಿ, ಜಪಾನು, ನಾಲ್ಕು ವರ್ಷಗಳ ವರೆಗೆ, ಪ್ರತಿ ವರ್ಷವೂ, ಯುದ್ಧಕ್ಕಾಗಿ ೧೨೨೦ ಕೋಟಿ ಎನ್ನುಗಳನ್ನು ವೆಚ್ಚಮಾಡಲು ಸಿದ್ಧವಾಗಿರುವುದು ಎಂಬ ಅಂಶವು ವ್ಯಕ್ತವಾಗುವುದು.

ಮೇಲಿನ ಅಂಕಿಗಳಲ್ಲಿ, ಜಪಾನಿನ ಸ್ವಾಧೀನದಲ್ಲಿ ಇರುವ, ಕೊರಿಯಾ, ಫಾರ್‌ಮೋಸಾ, ಮತ್ತು ಮಂಚೂರಿಯಾ ವಗೈರೆ ದೇಶಗಳ ಆರ್ಥಿಕ ಸಂಪತ್ತನ್ನು ಕಾಣಿಸಿಲ್ಲ. ಜಪಾನಿನ ಕಷ್ಟಕಾಲದಲ್ಲಿ ಈ ದೇಶಗಳು (ನಮ್ಮ ಭಾರತದೇಶವು ಇಂಗ್ಲಂಡಿಗೆ ಸಹಾಯ ಮಾಡಿದಂತೆ) ದುಡಿದು, ಇವರಿಗೆ ಒದಗಬಹುದಾದ ಆರ್ಥಿಕ ದುಸ್ಥಿತಿಯಿಂದ ಪಾರುಮಾಡಲು, ಸದಾ ಶಕ್ತ ವಾಗಿರುವವು ಎಂಬ ಅಂಶವನ್ನೂ ನಾವು ಇಲ್ಲಿ ಗಮನಕ್ಕೆ ತೆಗೆದುಕೊಳ್ಳ ಬೇಕಾಗುತ್ತದೆ.

ಜಪಾನಿನ ಚಿನ್ನದ ನಿಧಿಯು ಕೇವಲ ನೂರಮೂವತ್ತು ಕೋಟಿ ಎನ್ನುಗಳಷ್ಟು ಮಾತ್ರವೇ ಇರುವದು. ಈ ಚಿನ್ನವನ್ನು, ಇವರು ಅಂತರ ರಾಷ್ಟ್ರೀಯ ಉದ್ಯಮಕ್ಕೆ (International Payment) ಸೂಕ್ತ ಕಂಡಂತೆ ಉಪಯೋಗಿಸಿ, ಪರದೇಶದ ಮಾರ್ಕೆಟಿನಲ್ಲಿ, ಎನ್ ನಾಣ್ಯದ ದರವು, ಕಡಿಮೆ ಯಾಗದಂತೆ ನೋಡಿಕೊಳ್ಳುತ್ತಿರುವರು. ಈಚೆಗೆ ಜಪಾನ, ಮಂಚೂರಿಯಾ,

ಕೋರಿಯಾ ದೇಶಗಳಲ್ಲಿ, ಚಿನ್ನ ಅಗಿಯುವ ಕೆಲಸವನ್ನು ಬಹು ಬಿರುಸಾಗಿ ನಡೆಸುತ್ತಲಿರುವರು.

ಇವರ ಮುಖ್ಯವಾದ ಆಮದಿನ ಪದಾರ್ಥಗಳೆಂದರೆ, ಹತ್ತಿ, ಕಬ್ಬಿಣ, ಉಕ್ಕು, ಉಣ್ಣೆ, ಮತ್ತು ಉಡ್‌ಪಲ್ಪ. ಸದ್ಯಕ್ಕೆ ನಿರ್ಮಾಣವಾದ ಕಾನೂನಿನಿಂದ ಇವುಗಳ ಆಮದು ಬಹಳಮಟ್ಟಿಗೆ ನಿಂತಿರುವುದು. ಇದರಿಂದ ದೇಶದ ಹಣವು ಪರದೇಶಗಳಿಗೆ ಹರಿಯುವುದನ್ನು ತಡೆಗಟ್ಟಿದಂತೆಯಾಗಿರುವುದು. ಯುದ್ಧದ ಸಾಮಗ್ರಿಗಳನ್ನು, ಯಥೇಷ್ಟವಾಗಿ ತಯಾರಿಸಲು ಮಂಚೂರಿಯದಿಂದ ಬೇಕಾದಷ್ಟು ಕಬ್ಬಿಣವನ್ನು ತರಿಸಲು, ಆಗಲೇ ಏರ್ಪಾಡುಗಳು ನಡೆದಿರುವವು. ತಾಮ್ರ, ಜಿಂಕ್, ನಿಕ್ಕಲ್ ವಗೈರೆ ಲೋಹಗಳು, ಈ ದೇಶದಲ್ಲಿಯೇ, ಹೆಚ್ಚಾಗಿ ದೊರೆಯುವುದರಿಂದ, ಅವುಗಳ ಕೊರತೆಯೇನೂ ಜಪಾನಿಗೆ ಇರುವುದಿಲ್ಲ.

ಸದ್ಯಕ್ಕೆ ಅಗತ್ಯವಿಲ್ಲದ ಮತ್ತು ಸುಖಭೋಗಗಳ ವಸ್ತುಗಳ ಆಮದು ನಿಲ್ಲಿಸಲ್ಪಟ್ಟಿದೆ. ಜನಗಳಿಗೆ, ಹೊಸ ಉಡುಪನ್ನು ಹೊಲಿಸಿಕೊಳ್ಳದೆ ಇರುವುದರಲ್ಲಿಯೇ ಕಾಲಹಾಕಬೇಕೆಂಬ ಉಪದೇಶವು ಬೋಧಿಸಲ್ಪಟ್ಟಿರುವುದು.

ಪೆಟ್ರೋಲಿನ ಮಿಗಿತೆಗಾಗಿ ಸ್ವಂತ ಮೋಟಾರ್ ಕಾರುಗಳನ್ನೆಲ್ಲಾ, ಗ್ಯಾರೇಜಿನಲ್ಲಿಯೇ ನಿಲ್ಲಿಸಲಾಗಿದೆ. ಪರದೇಶದಿಂದ ತರಿಸಿ ತಿನ್ನುತ್ತಿದ್ದ ಮಾಂಸಕ್ಕೆ ಬದಲಾಗಿ, ಹೆಚ್ಚಾಗಿ ಮೀನುಗಳನ್ನು ತಿಂದರೆ ಸಾಕೆಂಬ ಅಭ್ಯಾಸವು ಆಚರಣೆಗೆ ಬಂದಿದೆ. ಹೊಸದಾಗಿ, ಕಟ್ಟಡಗಳನ್ನು ಕಟ್ಟುವುದನ್ನು ನಿಲ್ಲಿಸಲಾಗಿದೆ. ಈ ರೀತಿಯಲ್ಲಿ, ನೂರಾರು ವಿಷಯಗಳಲ್ಲಿ, ಮಿತವ್ಯಯವನ್ನು ಜಪಾನಿಯರೀಗ ಅಭ್ಯಾಸಿಸುತ್ತಿರುವರು.

ಇದರ ಜೊತೆಗೆ ಸರಕಾರವು, ಜನಗಳ ಸ್ವದೇಶಾಭಿಮಾನವು ಭದ್ರವಾಗಿ ನಿಲ್ಲುವಂತೆ, ಬೇಕಾದಷ್ಟು ಮಾರ್ಗಗಳಿಂದ ಕೆಲಸಮಾಡುತ್ತಲಿದೆ. ಮಿತವ್ಯಯದ ಜೀವನವನ್ನು ಸಾಗಿಸಿ, ಬೇಕಾದ ಕಡೆ ಹಣಕಾಸನ್ನು ಉಳಿತಾಯ ಮಾಡಿ ದೇಶಕ್ಕೆ, ಸಹಾಯ ಮಾಡಬೇಕೆಂಬ ಮಾತು, ಪ್ರತಿ ಘಳಿಗೆಯಲ್ಲಿಯೂ ಇಲ್ಲಿಯ ಮಾನವರ ಕಿವಿಯ ಮೇಲೆ ಬೀಳುತ್ತಲೇ ಇರುವುದು. ಇಷ್ಟು ವಿಷಯಗಳು ಇಲ್ಲಿ ನಡೆಯುತ್ತಿರಲಾಗಿ ಜಪಾನಿಯರಿಗೆ ಅಪಜಯವು ಎಂದಿಗಾದರೂ ಉಂಟಾದೀತೇ ? ಉಂಟಾದರೆ ಅದು ದೈವಯತ್ನವೇ.

---

# ಜಪಾನವು ಭಾರತವನ್ನು ಆಕ್ರಮಿಸುವುದೇ ?



ಅನೇಕ ಭಾರತೀಯ ವೃತ್ತಪತ್ರಿಕೆಗಳಲ್ಲಿ ಜಪಾನವು ಭಾರತವನ್ನು ಆಕ್ರಮಿಸುವ ಭೀತಿಯನ್ನು ವ್ಯಕ್ತಪಡಿಸುತ್ತಿವೆ. ಮಹತ್ವಾಕಾಂಕ್ಷಿಯಾದ ಜಪಾನವು ಸಾಮ್ರಾಜ್ಯ ಲಾಲಸೆಯುಳ್ಳದ್ದಾಗಿದೆ. ಇಂಗ್ಲಂಡವು ಸಾಮ್ರಾಜ್ಯವನ್ನು ಕಟ್ಟಿದಂತೆ, ಜಪಾನವೂ ಏಶಿಯಾಖಂಡದಲ್ಲಿ ತಮ್ಮ ಸಾಮ್ರಾಜ್ಯವನ್ನು ಬೆಳೆಸಲು ಹವಣಿಸುತ್ತಿರುವದು. ಇಂದು ಚೀನವನ್ನು ನುಂಗುತ್ತಿರುವದು. ಮುಂದಿನ ಆಕ್ರಮಣವು ಭಾರತದ ಮೇಲೆಯೇ ಎಂಬುದೇ ಇವರ ತರ್ಕಸರಣಿ.

ಕಾಲವು ಬದಲಾಗಿದೆ. ಜಗತ್ತಿನಲ್ಲಿಯ ಎಲ್ಲ ರಾಷ್ಟ್ರಗಳೂ ಜಾಗೃತವಾಗಿವೆ. ಸಾಮ್ರಾಜ್ಯವಿರೋಧಿ ಭಾವನೆಯು ಎಲ್ಲೆಲ್ಲಿಯೂ ತಲೆಯೆತ್ತಿರುವ ಈ ಸಮಯದಲ್ಲಿ ಸಾಮ್ರಾಜ್ಯಗಳನ್ನು ಕಟ್ಟುವ ಕಾಲವು ಮುಗಿದಿದೆ ಎಂದು ಒಮ್ಮೆ ಅನಿಸುತ್ತದೆ. ಆದರೆ ಇತ್ತೀಚಿನ ವಾತಾವರಣದಿಂದ ರಾಷ್ಟ್ರದ ಬಲಾಬಲಗಳ ಮೇಲೆಯೇ ಈ ಪ್ರಶ್ನೆಯ ಕಡೆಗೆ ನೋಡುವದು ಆವಶ್ಯವಿದೆ.

ಜಪಾನವು ಇಂದು ಭಾರತದ ಮೇಲೆ ದಂಡೆತ್ತಿಬರುವದೆಂದರೇನು? ಇಂದು ಭಾರತವು ಸ್ವತಂತ್ರ ರಾಷ್ಟ್ರವಲ್ಲ. ಬ್ರಿಟಿಶರ ಅಧೀನ ರಾಷ್ಟ್ರವು. ಅವರ ರಕ್ಷಣೆಯಲ್ಲಿದ್ದ ರಾಷ್ಟ್ರವು ಅಂದಮೇಲೆ ಇಂದು ಭಾರತದ ಮೇಲೆ ದಂಡೆತ್ತಿ ಬರುವದೆಂದರೆ, ಬ್ರಿಟಿಶ ಸಾಮ್ರಾಜ್ಯದ ಮೇಲೆ ದಂಡೆತ್ತಿ ಬಂದಂತೆಯೇ. ಇದು ಸಾಧ್ಯವೆ? ಬ್ರಿಟಿಶ ಸಾಮ್ರಾಜ್ಯದ ಬಲದ ಮುಂದೆ ಜಪಾನು ನಿಲ್ಲಲಾರದು. ಇಂಥ ಬಲಿಷ್ಠರಾಷ್ಟ್ರದೊಡನೆ ಜಪಾನು ವೈರವನ್ನು ಕಟ್ಟಿಕೊಳ್ಳುವದು ಶಕ್ಯವೇ ಕಾಣುವದಿಲ್ಲ. ಇನ್ನು ಬ್ರಿಟಿಶ ಸಾಮ್ರಾಜ್ಯನಾಶಕ ಶಕ್ತಿಗಳು ಒಂದುಗೂಡಿದಾಗ ಅದರ ನೆರವಿನಿಂದ ಜಪಾನವು ಆಕ್ರಮಣವನ್ನು ನಡೆಯಿಸಬೇಕು. ಆದರೆ ಆ ಕಾಲವು ಈ ಯುಗ

ದಲ್ಲಿಯಂತೂ ಶಕ್ಯಕಾಣುವದಿಲ್ಲ. ಒಂದು ವೇಳೆ ಬಂದದ್ದೇ ಆದರೆ ಬ್ರಿಟಿಶರು ಭಾರತವನ್ನು ಸುಮ್ಮನೆ ಹೋಗಗೊಡುವರೇ! ಭಾರತಕ್ಕಾಗಿ ತಮ್ಮ ಶಕ್ತಿ ಸರ್ವಸ್ವವನ್ನು ಸೂರೆಮಾಡದೆ ಬಿಡುವದೇ ಶಕ್ಯವಿಲ್ಲ. ಆರ್ಥಿಕ ದೃಷ್ಟಿ ಯಿಂದಲೂ ಯುದ್ಧಸಾಮುಗ್ರಿಗಳ ದೃಷ್ಟಿಯಿಂದಲೂ, ಜನಬಲದ ದೃಷ್ಟಿ ಯಿಂದಲೂ ಬ್ರಿಟಿಶ ಸಾಮ್ರಾಜ್ಯದ ಎದುರಿಗೆ ಜಪಾನವು ಬಾಳಲಾರದೆಂಬು ದನ್ನು ಎಂತಹ ಕಗ್ಗ ಕುರುಬನೂ ಹೇಳಬಹುದು.

ಇನ್ನು ಒಂದು ವೇಳೆ ಭಾರತವನ್ನು ಆಕ್ರಮಿಸುವ ಸಂಕಲ್ಪವನ್ನೇ ಮಾಡಿದರೆ, ಭಾರತಕ್ಕೆ ಬರಲು ಎರಡೇ ಮಾರ್ಗಗಳು. ಒಂದು ಚೀನವನ್ನು ಪೂರ್ಣವಾಗಿ ಜಯಿಸಿ, ಬ್ರಹ್ಮದೇಶದ ಮಾರ್ಗವಾಗಿ; ಇಲ್ಲವೆ ತಿಬೇಟದ ಮಾರ್ಗವಾಗಿ ಬರಬೇಕು; ಅಥವಾ ಜಲಮಾರ್ಗವಾಗಿ ಬರಬೇಕು.

ಇಡೀ ಚೀನ ರಾಷ್ಟ್ರವನ್ನು ಗೆಲ್ಲಲಿಕ್ಕೇ ಇವರಿಗೆ ಎಷ್ಟೋ ವರ್ಷ ಗಳು ಹತ್ತಬಹುದು. ಗೆದ್ದರೂ ಗೆದ್ದಭೂಮಿಗಳನ್ನು ದಕ್ಕಿಸಿಕೊಂಡು ಅದನ್ನು ಭೋಗಿಸಲಿಕ್ಕೆ ಅನೇಕ ವರ್ಷಗಳು ಬೇಕಾಗುವವೆಂಬುದರಲ್ಲಿ ಸಂದೇಹವಿಲ್ಲ. ಇಷ್ಟೆಲ್ಲ ತೊಂದರೆಗಳನ್ನು ದಾಟಿ ಬರುವವರೆಗೆ, ಭಾರತವೂ ಉಳಿದ ರಾಷ್ಟ್ರಗಳೂ ಸುಮ್ಮನೆ ಇರುವದು ಶಕ್ಯವಿದೆಯೇ? ಇನೆಲ್ಲವೂ ತರ್ಕಸಾಮ್ರಾಜ್ಯದೊಳಗಿನ ಭಯವಲ್ಲದೆ ಮತ್ತೇನು ಇಲ್ಲ.

ಇನ್ನು ಜಲಮಾರ್ಗವಾಗಿ ಬರಬೇಕಾದರೆ, ಜಾವಾ, ಸುಮಾತ್ರಾ, ಇಂಡೋಚಯುನಾ, ಫಿಲಿಫೈನ್, ಸಿಯಾಂ, ಸಿಂಗಾಪೂರ ಮೊದಲಾದವು ಗಳನ್ನು ತೆಗೆದುಕೊಂಡೇ ಮುಂದೆ ಬರಬೇಕು. ಯಾಕಂದರೆ ಇವೆಲ್ಲವೂ ಭಾರತದಂತೆ ಖನಿಜ ಸಂಪತ್ತುಗಳಿಂದ ತುಂಬಿವೆ. ಇವುಗಳ ಆಕ್ರಮಣವೆಂ ದರೆ, ಫ್ರಾನ್ಸ್, ಡಚ್, ಇಂಗ್ಲಿಷರ ಮೇಲೆ ದಂಡೆತ್ತಿ ಬರಬೇಕು. ಈ ಮೂರೂ ರಾಷ್ಟ್ರಗಳೊಡನೆ ಹೋರಾಡಬೇಕು. ಆಮೇಲೆ ಭಾರತಕ್ಕೆ ಬರಬೇಕು. ಇವು ಎರಡನೇ ಮಾರ್ಗಗಳಲ್ಲಿರುವ ತೊಂದರೆಗಳು. ಇಂದು ಜಪಾನವು ತನ್ನ ಸುತ್ತುಮುತ್ತಲೆಲ್ಲ ಶತ್ರುಗಳನ್ನು ನಿರ್ಮಾಣ ಮಾಡಿಕೊಳ್ಳು ವಷ್ಟು ಬುದ್ಧಿಹೀನವಿಲ್ಲ. ಮನಸ್ಸುಮಾಡಿದರೂ ಅದು ಶಕ್ತಿಯ ಹೊರಗಿನ

ದಾಗಿದೆ. ಜಪಾನಕ್ಕೆ ಭಾರತಕ್ಕಿಂತಲೂ ಜಾವಾ, ಸುಮಾತ್ರಾಗಳ ಮೇಲೆ ಹೆಚ್ಚಿನ ಕಣ್ಣಿದೆ. ಯಾಕಂದರೆ, ತಗರ, ಕಬ್ಬಿಣ, ರಬ್ಬರ, ಪೆಟ್ರೋಲಗಳ ಕಣಿಗಳು ಅಲ್ಲಿ ವಿಪುಲವಾಗಿವೆ.

ಬ್ರಿಟಿಶರೊಡನೆ ಹೋರಾಡಲು ಶಕ್ಯವಿಲ್ಲದಿದ್ದರೂ, ಸ್ವತಂತ್ರ ಭಾರತದ ಮೇಲೇಕೆ ದಂಡೆತ್ತಿ ಬರಬಾರದು ಎಂಬುದೊಂದು ಪ್ರಶ್ನೆ. ಬ್ರಿಟಿಶ ಸಾಮ್ರಾಜ್ಯವನ್ನೇ ಎದುರಿಸಿ ಸ್ವತಂತ್ರವಾದ ಭಾರತವು ಇಂತಹ ಜಪಾನಕ್ಕೆ ಬೆದರುವದೇ? ಜಪಾನಕ್ಕೆ ಬೆದರುವಷ್ಟು ಸತ್ವಹೀನವಿದ್ದರೆ, ಅದು ಸ್ವತಂತ್ರವೇ ಆಗಲಾರದು. ಒಂದುವೇಳೆ ಆಕ್ರಮಿಸಲು ಪ್ರಾರಂಭಿಸಿದರೆಂದೂ ತಿಳಿಯೋಣ. ಅನೈಕ್ಯದಿಂದ ತುಂಬಿದ ಭಾರತವನ್ನು ವಶಪಡಿಸಿಕೊಳ್ಳಲಿಕ್ಕೇ ಬ್ರಿಟಿಶರಿಗೆ ೧೦೦ ವರುಷಗಳು ಹಿಡಿದವು. ಅಂದಮೇಲೆ ಏಕರಾಷ್ಟ್ರೀಯತ್ವವುಂಟಾದ ಭಾರತವನ್ನು ಬೇಗನೆ ಗೆಲ್ಲಲು ಸಾಧ್ಯವೇ ಎಂಬುದನ್ನು ನಾವು ವಿಚಾರ ಮಾಡಬೇಕು. ಯಾವುದೇ ದೃಷ್ಟಿಯಿಂದ ವಿಚಾರಿಸಿದರೂ ಭಾರತದೇಶಕ್ಕೆ ದಂಡೆತ್ತಿಬರುವ ಮಾತು ಬಯಲೊಳಗಿನ ಭಯವೇ ಹೊರತು ಮತ್ತೊಂದಿಲ್ಲ.

ಭಾರತವನ್ನು ಆಕ್ರಮಿಸುವ ಉದ್ದೇಶವಾದರೂ ಏನು? ಒಂದು ಸಾಮ್ರಾಜ್ಯಲಾಲಸೆ; ಇನ್ನೊಂದು ಆರ್ಥಿಕ ಸುಲಿಗೆ.

ಇಂದು ಜಪಾನವು ನೆರೆಯ ರಾಷ್ಟ್ರವಾದ ಚೀನವನ್ನು ಜಯಿಸಿದ್ದೇ ಆದರೆ, ಅದಕ್ಕೆ ವಿಪುಲವಾದ ಖನಿಜಸಂಪತ್ತೂ ಪೇಟೆಯೂ ದೊರೆಯುವದು.

ಈ ಯುಗದಲ್ಲಿ ಸ್ವಾತಂತ್ರ್ಯಹರಣಕ್ಕಿಂತಲೂ, ಆರ್ಥಿಕ ಸುಲಿಗೆಯೇ ಸರ್ವ ಚಟುವಟಿಕೆಗಳ ಮೂಲವಾಗಿದೆ. ಸಂಯುಕ್ತ ಅಮೇರಿಕವು ಶಕ್ತಿಯುತ ರಾಷ್ಟ್ರವಾಗಿದ್ದರೂ ದಕ್ಷಿಣ ಅಮೇರಿಕೆಯ ಸ್ವಾತಂತ್ರ್ಯವನ್ನು ಹರಣ ಮಾಡಿಲ್ಲ. ಅಲ್ಲಿಂದಲೇ ಖನಿಜಸಂಪತ್ತು ಸಂಯುಕ್ತ ಅಮೇರಿಕೆಗೆ ದೊರೆಯುವವು. ಅದರಂತೆಯೇ ತನ್ನ ನೆರೆಯ ರಾಷ್ಟ್ರಗಳಿಂದ ಆರ್ಥಿಕ ಸುಲಿಗೆಗೆ ಅನುಕೂಲವಾದರೆ, ಯುದ್ಧದ ಅವಶ್ಯಕತೆಯೇ ಜಪಾನಿಗಿಲ್ಲ.

ಬ್ರಿಟಿಶ, ಫ್ರಾನ್ಸ ಮೊದಲಾದ ಪಾಶ್ಚಾತ್ಯ ರಾಜ್ಯಗಳಿಗೆ, ತಮ್ಮ ವಸಹಾತುಗಳಲ್ಲಿ ಜಪಾನಿಗಳ ವ್ಯಾಪಾರವು ಬೆಳೆಯುವದೆಂಬ ಅಸೂಯೆಯೇ ಹೊರತು ಭಾರತೀಯರಿಗೇನು? ಭಾರತೀಯರ ಬಗ್ಗೆ ಅವರಲ್ಲಿ ದ್ವೇಷಕ್ಕೆ ಕಾರಣವೇಯಿಲ್ಲ.

ಬ್ರಿಟಿಶರ ಶತ್ರುಗಳೆಲ್ಲರೂ ನಮ್ಮ ಶತ್ರುಗಳಲ್ಲ. ಆದುದರಿಂದ ಜಪಾನವನ್ನು ಅವರು ಉಪೇಕ್ಷಿಸುತ್ತಿದ್ದರೆ, ನಾವೇಕೆ?

ಇನ್ನೊಂದು ಮಾತು ಹೇಳಿ ಈ ಪ್ರಕರಣವನ್ನು ಮುಗಿಸುತ್ತೇನೆ. ಇತ್ತೀಚಿನ ಭಾರತೀಯ ವಿದೇಶದ ಧೋರಣದಲ್ಲಿ ಜಪಾನದ ಬಗ್ಗೆ ಅಪಶ್ರುತಿಯು ಕೇಳಬರುತ್ತಲಿದೆ. ಚೀನದ ಬಗ್ಗೆ ಭಾರತವು ಸಹಾನುಭೂತಿಯನ್ನು ತೋರಿಸಲಿ. ತೋರಿಸುವದೂ ಯೋಗ್ಯವೇ ಆಗಿದೆ. ಆದರೆ, ಜಪಾನದ ಬಗ್ಗೆ ಯಾವ ಧೋರಣವನ್ನು ಸ್ವೀಕರಿಸಬೇಕೆಂಬುದೇ ಮುಖ್ಯ ಪ್ರಶ್ನೆ. ಜಪಾನ ದೇಶವು, ಪ್ರತಿದಿನವೂ ಏಶಿಯಾಖಂಡದಲ್ಲಿ ಶಕ್ತಿಯುತವಾಗುತ್ತಿರುವದು. ಸದ್ಯದ ಯುದ್ಧದಲ್ಲಿ ಅದು ಜಯವನ್ನೇ ಪಡೆಯಲಿ, ಅಥವಾ, ಚೀನಾದೊಡನೆ ಒಪ್ಪಂದವನ್ನೇ ಮಾಡಿಕೊಳ್ಳಲಿ, ಜಪಾನದ ಸ್ಥಿತಿಯು ಈಗಿರುವದಕ್ಕಿಂತಲೂ ಹೆಚ್ಚು ಉತ್ತಮವಾಗುವದೆಂಬುದರಲ್ಲಿ ಸಂದೇಹವೇ ಇಲ್ಲ. ಇಂದಿಲ್ಲ ನಾಳೆ, ಏಶಿಯದ ರಾಷ್ಟ್ರಗಳೆಲ್ಲ ಒಂದಾಗುವ ಸಮಯವು ನಿಶ್ಚಿತ. ನವಮನ್ವಂತರದ ನವವಿಚಾರಗಳಂತೆಯೂ ಜಪಾನದ ವಿರೋಧ ಕಟ್ಟಿಕೊಳ್ಳುವದು ಯೋಗ್ಯವಾಗಬಹುದೇ? ಈ ದೃಷ್ಟಿಯಿಂದ ಭಾರತೀಯರಿಗೆ ವಿದೇಶನೀತಿಯನ್ನು ಬಹು ಸೂಕ್ಷ್ಮವಾಗಿ ವಿಚಾರಿಸುವ ಸಮಯವು ಬಂದೊದಗಿದೆ. ಭಾರತದ ಸ್ವಾತಂತ್ರ್ಯೋದ್ಯಮದಲ್ಲಿಯ ಮಹತ್ವವಾದ ಸಮಸ್ಯೆಯು ಇದೊಂದು.



# ಭಾರತದ ಸ್ನೇಹಿತರಾದ ಜಪಾನಿಯರು



## ಮಿತ್ಸುರೊ ತೋಯಾಮರವರು

ಜಪಾನದೇಶದ ಚಕ್ರವರ್ತಿಗಳು ಪ್ರಜಗಳಿಂದ ಪಡೆಯುತ್ತಿರುವಷ್ಟು ಮಾನ್ಯತೆಯನ್ನು ಇನ್ನಾವ ಚಕ್ರವರ್ತಿಗಳೂ ಪಡೆಯುತ್ತಿಲ್ಲವೆಂದು ಘಂಟಾ ಘೋಷವಾಗಿ ಹೇಳಬಹುದು. ಚಕ್ರವರ್ತಿಗಳ ಅಪ್ಪಣೆಯಂತೆ ಲಕ್ಷಾಂತರ ಜಪಾನಿಯರು ಮರುಮಾತನಾಡದೆ ತಮ್ಮ ಪ್ರಾಣಗಳನ್ನರ್ಪಿಸಲು ಸಿದ್ಧರಿರುವರು. ಇಂದು ಜಪಾನದಲ್ಲಿ ಚಕ್ರವರ್ತಿಗಳ ಹೊರತು ಬೇರಿನ್ನಾವ ವ್ಯಕ್ತಿಯೇ ಆಗಲಿ, ಜನಸಮುದಾಯದಿಂದ ಅಪರಿಮಿತ ಮನ್ನಣೆಯನ್ನು ಪಡೆಯುತ್ತಿರುವುದಾದ ಆ ವ್ಯಕ್ತಿಯು ಯಾವುದೆಂದರೆ ಮಹಾಋಷಿಗಳೂ, ವೇದಾಂತಿಗಳೂ, ರಾಜನೀತಿಪಟುಗಳೂ ಆದ "ಮಿತ್ಸುರೊ ತೋಯಾಮ" ರಲ್ಲದೆ ಬೇರೆ ಯಾರೂ ಇರಲಾರರು.

೧೮೫೪ರಲ್ಲಿ ಬಲಹೀನವಾದ ಜಪಾನ ಸರಕಾರವು ಪಾಶ್ಚಿಮಾತ್ಯ ದೇಶಗಳೊಡನೆ ಮಾಡಿಕೊಂಡ ವ್ಯಾಪಾರದ ಕರಾರುಗಳಿಂದ ಬಿಳಿಜನಾಂಗದವರು ಜಪಾನಿಯರ ಮೇಲೆ ಕುದುರೆಸವಾರಿ ಮಾಡಲಿಕ್ಕೆ ಪ್ರಾರಂಭಿಸಿದರು. ಜಪಾನ ಸರಕಾರವು ಪಾಶ್ಚಿಮಾತ್ಯ ದೇಶಗಳ ಸರಕಿನ ಮೇಲೆ ಸುಂಕ ವಿಧಿಸಕೂಡದೆಂದೂ, ಪರಕೀಯರ ರಕ್ಷಣೆಗಾಗಿ ಪಾಶ್ಚಿಮಾತ್ಯರ ಜಲಸೈನಿಕರು ಜಪಾನಿನಲ್ಲಿರಬೇಕೆಂದೂ ಒಪ್ಪಂದಿನಲ್ಲಿ ಕಾಣಿಸಲಾಗಿತ್ತು. ಈ ದೇಶದ ಚರಿತ್ರಾವಲೋಕನದಿಂದಲೂ ಜನರು ಹೇಳುತ್ತಿರುವ ಮಾತುಗಳಿಂದಲೂ ಹೇಳಬೇಕೆಂದರೆ ಇಂಗ್ಲಿಷರ ದರ್ಪದಿಂದ ಜರ್ಜರಿತರಾಗುವ ಹಿಂದೀಯರಿಗಿಂತಲೂ ಹೆಚ್ಚು ಕಷ್ಟವನ್ನು ಜಪಾನಿಯರು ಬಿಳಿಯ ಜನಾಂಗದವರಿಂದ ಅನುಭವಿಸುತ್ತಿದ್ದರು. ಶಕ್ತಿಹೀನವಾದ ಸರಕಾರವು ಬಿಳಿಜನಾಂಗದವರು ಹಾಕಿದ

ಗೆರೆಯನ್ನು ದಾಟದೆ ವಿಧೇಯತನದಿಂದ ವರ್ತಿಸುತ್ತಿತ್ತು. ಕೆಲವು ವೇಳೆ ಪರದೇಶದ ರಾಯಭಾರಿಗಳ ಬೆದರಿಕೆಗಾಗಿ ಜಪಾನ ಸರಕಾರವು, ತನ್ನ ಸ್ತ್ರೀಯರನ್ನು ಬಲಿಕೊಟ್ಟಿತು. ತನ್ನ ಹೆಂಗಸರ ಮಾನವನ್ನು ರಕ್ಷಿಸಿಕೊಳ್ಳು ವಷ್ಟು ಶಕ್ತಿಯು ಈ ಜಪಾನ ಸರಕಾರಕ್ಕೆ ೧೮೫೮ರ ವೇಳೆಯಲ್ಲಿ ಇರಲಿಲ್ಲ.

ದೇಶವು ಇಂಥ ವಿಪನ್ನಾವಸ್ಥೆಯಲ್ಲಿರುವಾಗ ೧೮೬೨ರಲ್ಲಿ ಮಿತ್ಸುರೊ ತೋಯಾಮುರವರು ಜನ್ಮತಾಳಿದರು. ಇವರ ಜನ್ಮಕುಂಡಲಿಯನ್ನು ಅನೇಕ ಜ್ಯೋತಿಷಿಗಳು ನೋಡಿ "ತೋಯಾಮುರವರ ಧುರೀಣತ್ವದಲ್ಲಿ ಜಪಾನ ದೇಶವು ಪರಕೀಯರ ದಾಸ್ಯತ್ವದಿಂದ ಬಿಡುಗಡೆ ಹೊಂದಿ ತನ್ನ ಕೀರ್ತಿಯನ್ನು ಜಗತ್ತಿನಲ್ಲಿ ಹರಡಿಸುವದು" ಎಂದು ತಮ್ಮ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದ್ದರು. ತೋಯಾಮುರವರು, ಕುಬೇರನ ಮಗನಾಗಿ ಹುಟ್ಟದಿದ್ದರೂ ಕ್ಷಾತ್ರಧರ್ಮಕ್ಕೆ ಪ್ರಖ್ಯಾತವಾದ ಸಮುರಾಯಿ ಮನೆತನದಲ್ಲಿ ಜನ್ಮತಾಳಿ ದರು. ಇವರ ಬಾಲ್ಯವಲ್ಲಿ ಬಿಳಿಜನಾಂಗದವರು, ಬೀದಿಗಳಲ್ಲಿ ಹೋಗುವಾಗ, ಬೇರೆ ಬೇರೆ ಸ್ಥಳಗಳಲ್ಲಿ ಜಪಾನಿಯರಿಗಿಂತ ಉನ್ನತ ಮರ್ಯಾದೆಗಳನ್ನು ಪಡೆಯುತ್ತಿರುವದನ್ನು ನೋಡಿ ಸಹಿಸಲಾರದವರಾದರು. ಸಾವಿರಾರು ಮೈಲುಗಳ ದೂರದಿಂದ ಬಂದು ಇಲ್ಲಿಯ ಜನರ ಮೇಲೆ ದಬ್ಬಾಳಿಕೆ ನಡೆಸು ವವರನ್ನು ದೇಶದಿಂದ ಓಡಿಸಿ ದೇಶದ ಗೌರವವನ್ನು ಹೆಚ್ಚಿಸಬೇಕೆಂದು ನಿರ್ಧರಿಸಿದರು. ಕ್ರಮೇಣವಾಗಿ ಈ ವಿಚಾರವು ಪ್ರತಿಯೊಬ್ಬ ತರುಣನ ತಲೆಯನ್ನು ಪ್ರವೇಶಮಾಡಿತು. ಸಾವಿರಾರು ತರುಣರು ಇವರ ಉಪದೇಶ ಕ್ಕೊಳಗಾಗಿ ದೇಶದ ಗೌರವವನ್ನು ಕಾಪಾಡುವ ಪ್ರತಿಜ್ಞೆಯನ್ನು ಸ್ವೀಕರಿಸಿ ದರು. ಅಂದಿನಿಂದ ಬಿಳಿಜನಾಂಗದವರು ಮಾಡುವ ದಬ್ಬಾಳಿಕೆಯು ಕಣ್ಣಿಗೆ ಬಿದ್ದುದಾದರೆ ಮಾಡಿದವನ ಸುಳಿವು ಮರುದಿನವೇ ಇಲ್ಲದಂತಾಗುತ್ತಿತ್ತು. ಈ ರೀತಿಯಾಗಿ ತಮ್ಮವರ ಜೀವಹತ್ತ್ಯೆಯನ್ನು ಕಂಡು ಪಾಶ್ಚಿಮಾತ್ಯರು ಜಪಾನ ಸರಕಾರಕ್ಕೆ ದೂರಿಕೊಂಡರು. ಬಲಗುಂದಿದ ಜಪಾನ ಸರಕಾರವು, ಪಾಶ್ಚಿಮಾತ್ಯರಿಗೆ ಯಾವ ರೀತಿ ಹೆದರುತ್ತಿತ್ತೋ, ಅದೇ ರೀತಿಯಲ್ಲಿ ಸ್ವದೇಶದ ದೇಶಪ್ರೇಮಿಗಳನ್ನೂ ಶಿಕ್ಷಿಸಲು ಬಲಹೀನವಾಗಿತ್ತು. ತೋಯಾಮು ರವರು ೨೮ ವರ್ಷ ಪ್ರಾಯದವರಾದೊಡನೆ ಬಂದು "ಕರಿಸರ್ಪ ಸಂಘ"

(The black dragons) ವನ್ನು ಸ್ಥಾಪಿಸಿದರು. ದೇಶಾಭ್ಯುದಯವೇ ಈ ಸಂಘದ ಮುಖ್ಯ ಗುರಿಯಾಗಿತ್ತು. ಈ ಧ್ಯೇಯಸಾಧನೆಗಾಗಿ ಲಕ್ಷಾಂತರ ತರುಣರು ಸದಸ್ಯರಾಗಿ ಪ್ರಾಣವನ್ನರ್ಪಿಸಲು ಸಿದ್ಧರಾದರು. ಈ ಕರಿಸರ್ಪ ಸಂಘದವರು ೧೮೯೦ರಲ್ಲಿ ಜಪಾನದೇಶದ ಪರದೇಶದ ಮಂತ್ರಿಗಳಾಗಿದ್ದ "ಓಕುಮ"ರವರಿಗೆ "ಜಪಾನದೇಶವು ಬಿಳಿಜನಾಂಗದವರೊಡನೆ ಮಾಡಿಕೊಂಡಿದ್ದ ಒಪ್ಪಂದಗಳಿಗೆಲ್ಲ ತಿಲಾಂಜಲಿಯನ್ನು ಈಯಬೇಕು" ಎಂದು ಸೂಚಿಸಿದರು. ಆದರೆ ಓಕುಮರವರು ಪಾಶ್ಚಿಮಾತ್ಯರ ಶಕ್ತಿಯನ್ನು ತಿಳಿದುಕೊಂಡಿದ್ದರಿಂದ ಅವರೊಡನೆ ಮಾಡಿಕೊಂಡಿದ್ದ ಒಪ್ಪಂದಗಳನ್ನೆಲ್ಲ ಮುರಿಯುವದು ವಿಹಿತವಲ್ಲೆಂದು ಭಾವಿಸಿ ಆ ಸಂಘದವರ ಬೇಡಿಕೆಯನ್ನು ನಿರಾಕರಿಸಿದರು. ಓಕುಮರವರು ಸಂಘದವರ ಸಲಹೆಯನ್ನು ನಿರಾಕರಿಸಿದ ಮರುದಿನವೇ ಅವರು ಬೀದಿಯಲ್ಲಿ ಹೋಗುತ್ತಿರುವಾಗ್ಗೆ ಒಂದು ಬಾಂಬು ಅವರ ಗಾಡಿಗೆ ತಗುಲಿತು; ಕಾಲುಗಳನ್ನು ಕಳೆದುಕೊಂಡರು. ಅಂದಿನಿಂದ ಯಾವ ಸರಕಾರಿಯೇ ಆಗಲಿ, ಸ್ವಲ್ಪ ದೇಶಪ್ರೇಮಹೀನನೆಂದು ಕಂಡುಬಂದರೆ ಅವನಿಗೆ ಈ ಕರಿಸರ್ಪ ಸಂಘದವರಿಂದ ಪ್ರಾಯಶ್ಚಿತ್ತವಾಗದೆ ಉಳಿಯುತ್ತಿದ್ದಿಲ್ಲ. ಜಪಾನಿನಲ್ಲಿ ದೇಶಪ್ರೇಮಿಗಳ ಚಟುವಟಿಕೆಯು ಹೆಚ್ಚಾಗಲು ಸರಕಾರವು ಬೇರೆ ಮಾರ್ಗ ತೋರದೆ ಸನ್ ೧೮೯೨ರಲ್ಲಿ ಪಾಶ್ಚಿಮಾತ್ಯ ದೇಶಗಳೊಡನೆ ಮಾಡಿಕೊಂಡಿದ್ದ ಅನ್ಯಾಯದ "ವ್ಯಾಪಾರದ ಒಪ್ಪಂದ"ಗಳಿಗೆ ತಿಲಾಂಜಲಿಯನ್ನು ಕೊಟ್ಟಿತು. ಪಾಶ್ಚಿಮಾತ್ಯರೂ ಕೂಡ, ಕಾಲಪರಿಸ್ಥಿತಿಯನ್ನು ತಿಳಿದುಕೊಂಡು ಸುಮ್ಮಗಾದರು.

ಜಪಾನದೇಶವು ಸನ್ ೧೮೫೪ರಿಂದ ಉಂಟಾದ ಪಾಶ್ಚಿಮಾತ್ಯರ ಸಂಪರ್ಕದಿಂದ ಸ್ವತಂತ್ರ ದೇಶವಾಗುಳಿದುಕೊಂಡು ಬಂದಿದ್ದರೂ, ಸನ್ ೧೮೯೨ರಿಂದ ಈಚೆಗೆ ೧೬ ಆಣೆಯ ಸ್ವತಂತ್ರ ದೇಶವಾಗಿ ಮಾರ್ಪಟ್ಟಿತು. ಸನ್ ೧೮೯೨ರಿಂದೀಚೆಗೆ ಪಾಶ್ಚಿಮಾತ್ಯರೆಲ್ಲರು, "ಜಪಾನಿಯರ ಕಾಯಿದೆಗಳೊಳಗೆ ವಾಸಮಾಡಬೇಕಾಗುವ ಸ್ಥಿತಿಯು" ಉಂಟಾಯಿತು. ಜಪಾನದೇಶವು ಕೂಡ, ಸರಿಸಮಾನತ್ವದ ಮೇಲೆ, ಪಾಶ್ಚಿಮಾತ್ಯದೇಶಗಳೊಡನೆ ಒಪ್ಪಂದಗಳನ್ನು ಮಾಡಿಕೊಂಡಿತು. ಪಾಶ್ಚಿಮಾತ್ಯರು, ಜಪಾನಿನಲ್ಲಿರಿಸಿದ್ದ,

ತಮ್ಮ ತಮ್ಮ ಜಲಸೈನಿಕರನ್ನು ಮರಳಿ ಕರೆದುಕೊಂಡಿದ್ದಲ್ಲದೆ, ತಮ್ಮ ಅಪರಾಧಿಗಳನ್ನು, ಜಪಾನಿಯರ ನ್ಯಾಯಸ್ಥಾನದಲ್ಲಿ, ವಿಚಾರಣೆಗೆ ಒಳಪಡಿಸುವಂತೆ ಒಪ್ಪಿಕೊಂಡರು. ಬಿಳಿಜನಾಂಗದ ದರ್ಪವು, ಈ ರೀತಿಯಾಗಿ, ಸನ್ ೧೮೯೯ರ ವೇಳೆಗೆ "ಏಶಿಯಾಖಂಡದ ಒಂದು ಚಿಕ್ಕ ರಾಷ್ಟ್ರವಾದ ಜಪಾನಿನಲ್ಲಿ ನಾಶಹೊಂದಿತು." ಈ ರೀತಿಯ ಮಹತ್ಕಾರ್ಯಕ್ಕೆ "ಮಿತ್ಸುರೊ ತೋಯಾಮರವರೇ ಕಾರಣರು.

ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ, ರಶಿಯಾದೇಶದವರು, ಜಪಾನಿಗೆ ಹತ್ತಿರವಿರುವ ಮಂಚೂರಿಯ, ಚೀನಾ ಮತ್ತು ಕೋರಿಯಾ ದೇಶಗಳಲ್ಲಿ, ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟುತ್ತಿರುವುದನ್ನು ನೋಡಿ, ಜಪಾನಿಯರು, ದಿಗಿಲುಗೊಂಡರು. ಒಂದೆರಡು ಸಂದರ್ಭಗಳಲ್ಲಿ ರಶಿಯಾದವರು, ಜಪಾನಿಯರ ನ್ಯಾಯಸಮ್ಮತವಾದ ಹಕ್ಕುಗಳನ್ನೂ ನಿರಾಕರಿಸಿದರು. ಜಪಾನ ಸರಕಾರವು, ಇಷ್ಟರ ವೇಳೆಗೆ ತಕ್ಕಷ್ಟು ಶಕ್ತಿಸಂಪನ್ನವಾಗಿದ್ದರೂ ಬಿಳಿಜನಾಂಗದವರಾದ ರಶಿಯನ್ನರ ಮೇಲೆ ಯುದ್ಧಮಾಡಿ, ಜಯವನ್ನು ಪಡೆಯುವದಕ್ಕೆ, ಅನುಮಾನವಾಗಿದ್ದರಿಂದ, ಅವರ ಮೇಲೆ ಯುದ್ಧಮಾಡುವುದಕ್ಕೆ ಹಿಂತೆಗೆಯಿತು. ಇಂಥ ಸ್ಥಿತಿಯಲ್ಲಿ, ಮಿತ್ಸುರೊ ತೋಯಾಮರವರು, ತಮ್ಮ ಲಕ್ಷಾಂತರ ಅನುಯಾಯಿಗಳೊಡನೆ, "ದೇಶದ ಗೌರವ"ವನ್ನು ಕಾಪಾಡುವುದಕ್ಕಾಗಿ, ಸರಕಾರವು, ರಶಿಯಾದವರ ಮೇಲೆ ಯುದ್ಧಮಾಡುವುದೇ ಸರಿಯೆಂದು ಸಲಹೆಯನ್ನು ಕೊಟ್ಟರು. ಸರಕಾರವು ತೋಯಾಮರವರು ಕೊಟ್ಟ ಬೆಂಬಲದಿಂದ, ರಶಿಯಾದವರ ಮೇಲೆ ಸನ್ ೧೯೦೪-೫ರಲ್ಲಿ ಯುದ್ಧಮಾಡಿ ಜಯವನ್ನು ಪಡೆಯಿತು. ಯುದ್ಧಕಾಲದಲ್ಲಿ, ತೋಯಾಮರವರ "ಕರಿಸರ್ಪ ಸಂಘ"ದ ಲಕ್ಷಾಂತರ ಸದಸ್ಯರುಗಳು, ಸರಕಾರದ ಸೈನ್ಯದೊಡನೆ ಸಹಕರಿಸಿ, ಜಯಲಕ್ಷ್ಮಿಯನ್ನು ಒಲಿಸಿಕೊಂಡರು.

ರಶಿಯಾ ಯುದ್ಧದ ನಂತರ, ತೋಯಾಮರವರ ಪ್ರಭಾವವು, ಇಡೀ ದೇಶದಲ್ಲೆಲ್ಲ ಪಸರಿಸಿತು. ಜನರೆಲ್ಲರು, ತೋಯಾಮರವರೇ ಮುಖ್ಯಮಂತ್ರಿಗಳಾಗಿ ರಾಜ್ಯವನ್ನು ಆಳಬೇಕೆಂದು, ಬಿನ್ನಯಿಸಿಕೊಳ್ಳಲು ಪ್ರಾರಂಭಿಸಿದರು.

ಅಂದಿನ ಸರಕಾರವೂ ಕೂಡ, ತೋಯಾಮುರವರು ಮುಖ್ಯಮಂತ್ರಿತ್ವವನ್ನು ಸ್ವೀಕರಿಸುವಂತೆ ಕೋರಿಕೊಂಡಿತು. ಇಷ್ಟು ರೀತಿಯಾಗಿ ಕೋರಿಕೆಗಳು ಬಂದರೂ, ತೋಯಾಮುರವರು ಸರಕಾರದ ಸೂತ್ರವನ್ನು ವಹಿಸುವುದಕ್ಕೆ ನಿರಾಕರಿಸಿದರು. "ಅಧಿಕಾರದ ಆಸೆಗಾಗಿ ನಾನು, ದೇಶಕ್ಕೆ ಸೇವೆ ಮಾಡಿದವನಲ್ಲ. ಶಾಂತಿಯ ಕಾಲದಲ್ಲಿ, ಯಾರು ಬೇಕಾದರೂ ರಾಜ್ಯಸೂತ್ರ ವನ್ನು ನಡೆಸಲು ಆಸ್ಪದವಿರುವುದು. ಇಂಥ ಬಿಕ್ಕಟ್ಟಿನ ಕಾಲದಲ್ಲಿ ತಾನು ವಹಿಸುವದು ಅಗತ್ಯವಿಲ್ಲ" ಎಂದು ಅವರು ಪ್ರಕಟಿಸಿ, ನಿರಾಕರಿಸಿದರು.

ತೋಯಾಮುರವರು, ಜನ್ಮದಾರಭ್ಯದಿಂದಲೇ ಬಿಳಿಜನಾಂಗದ ವೈರಿ ಗಳು. ಅದರಲ್ಲಿಯೂ, ಇಂಗ್ಲಿಷರನ್ನು ಕಂಡರೆ, ಅವರಿಗೆ ರೋಮಾಂಚನ ವೇಳುತ್ತಿತ್ತು. ಸನ್ ೧೯೨೦ರ ವರೆಗೆ ನಡೆದ "ಆಂಗ್ಲೋ-ಜಪಾನಿಯರ" ಸ್ನೇಹದ ಒಪ್ಪಂದದಿಂದ ಜಪಾನಿಗೆ, ಯಾವ ಪ್ರಯೋಜನಗಳು ಬರಲಾರ ವೆಂದು ಸಾರುತ್ತಿದ್ದರು. ತೋಯಾಮುರವರು, ಏಶಿಯಾಖಂಡದ ರಾಜಕೀಯ ಕೈದಿಗಳಿಗೆ "ಕಾಮಧೇನು"ವಾಗಿರುವರು. ಒಮ್ಮೆ ಚೀನಾದೇಶದ ಸನ್-ಯಾತ್-ಸೇನರು, ಸದ್ಯದ ಸರ್ವಾಧಿಕಾರಿಯಾದ ಚಾಂಗ-ಕೈ-ಷೇಕ್ ತಲೆತಪ್ಪಿಸಿಕೊಂಡು ಜಪಾನಿಗೆ ಬಂದಿದ್ದಾಗ, ತೋಯಾಮುರವರೇ ಅವರಿಗೆ ಆಶ್ರಯವನ್ನು ಕೊಟ್ಟು, ಅವರನ್ನು ರಕ್ಷಿಸಿದರು. ಗತಿಸಿದ ಪಂಜಾಬಿನ ಸಿಂಹರಾದ ಲಾಲಾ ಲಜಪತರಾಯರು ಎರಡಾವರ್ತಿ ಜಪಾನಿಗೆ ಬಂದಿದ್ದಾಗ, ತೋಯಾಮುರವರ ಸ್ನೇಹವನ್ನು ಸಂಪಾದಿಸಿ, "ಜಪಾನು ಮುಂದುವರಿದ ಗುಟ್ಟು"ಗಳನ್ನು ತಿಳಿದುಕೊಂಡರು. ಸನ್ ೧೯೧೫ರಲ್ಲಿ ಇಂಡಿಯಾದೇಶದಿಂದ ತಲೆತಪ್ಪಿಸಿಕೊಂಡು ಬಂದ ದೇಶಪ್ರೇಮಿ ರಾಸಬಿಹಾರಿ ಬೋಸರನ್ನು ಸಹ ಇವರೇ ರಕ್ಷಿಸಿದರು. ಇಂಗ್ಲಿಷ ಸರಕಾರದ ಸಲಹೆಯ ಮೇರೆಗೆ, ಜಪಾನ ಸರಕಾರವು ಬೋಸರನ್ನು, ಜಪಾನಿನಿಂದ ಕಳುಹಿಸುವುದಕ್ಕೆ ವಿಶ್ವಪ್ರಯತ್ನ ಗಳನ್ನು ಮಾಡಿತು. ಆದರೆ ವೀರ ತೋಯಾಮುರವರು, ಅಡ್ಡಬಂದಿದ್ದರಿಂದ, ಜಪಾನ ಸರಕಾರವು ಸುಮ್ಮನಿರಬೇಕಾಯಿತು.

ತೋಯಾಮುರವರು, ನೇರವಾಗಿ ಅಧಿಕಾರದ ಸೂತ್ರವನ್ನು ವಹಿಸು ವುದಕ್ಕೆ ನಿರಾಕರಿಸಿದರು. ಆದರೆ ಇವರ ಅನುಯಾಯಿಗಳು, ಮಂತ್ರಿಪದವಿ

ಗಳನ್ನು ಸ್ವೀಕರಿಸಿ, ಎಷ್ಟೋ ಸಲ ರಾಜ್ಯಸೂತ್ರವನ್ನು ನಡೆಸಿರುವರು. ಯಾವ ಮಂತ್ರಿಯೇ ಆಗಲಿ, ಪರದೇಶಗಳಲ್ಲಿ ಜಪಾನಿಗೆ ಅಗೌರವವನ್ನು ತರುವಂಥ ಕಾರ್ಯದಲ್ಲಿ ತೊಡಗಿದರೆ, ಮಾರನೆಯ ದಿನವೇ, ಆತನ ಸೂರು ವರುಷಗಳು ತುಂಬಿಬರುತ್ತಿದ್ದವು. ಜಪಾನದೇಶದಲ್ಲಿ ಮುಖ್ಯಮಂತ್ರಿತ್ವವನ್ನು ವಹಿಸುವುದಕ್ಕೆ ಜನರು ಹಿಂಜರಿಯುವರು. ಕಾರಣ, ಅವರ ಜೀವಮಾನವು ಇಂದೋ ನಾಳೆಯೋ ಎಂದಿರುವುದು. ಸ್ವಲ್ಪ ಅಚಾತುರ್ಯದ ಕೆಲಸವನ್ನು ಮಾಡಿದ್ದಾದರೆ, ಅವರ ಕೊಲೆಯು ಶತಸಿದ್ಧವಾದ ಮಾತಾಗಿತ್ತು. ಇಲ್ಲಿನ ವಿಮಾ ಕಂಪನಿಗಳೂ ಮುಖ್ಯಮಂತ್ರಿಗಳ ಜೀವವಿಮೆಯನ್ನು ಮಾಡಿಕೊಳ್ಳು ವುದಕ್ಕೆ ಮನಸ್ಸಿಲ್ಲದೆ ಮಾಡಿಕೊಳ್ಳುವುವು. ಆಳಿದ ಸರಾಸರಿ ಹತ್ತು ಮುಖ್ಯ ಮಂತ್ರಿಗಳಲ್ಲಿ ಎಂಟು ಜನರು, ತಮ್ಮ ಅಚಾತುರ್ಯಗಳಿಗಾಗಿ ಕೊಲೆ ಮಾಡಲ್ಪಟ್ಟಿರುವರು.

ಸನ್ ೧೯೩೩ರಲ್ಲಿ ಜಪಾನು ಅಂತರರಾಷ್ಟ್ರೀಯ ಸಂಘಕ್ಕೂ, ಸನ್ ೧೯೩೫ರಲ್ಲಿ ನಡೆದ ಅಂತರರಾಷ್ಟ್ರೀಯ ಜಲಸೈನಿಕ ಸಮ್ಮೇಲನಕ್ಕೂ ಶರಣು ಹೊಡೆಯುವುದಕ್ಕೆ ತೋಯಾಮರವರೇ ಕಾರಣರೆಂದು ಜನರು ಆಡಿಕೊಳ್ಳು ವರು. ಸನ್ ೧೯೩೫ರಲ್ಲಿ ಬಿಳಿರಾಜ್ಯಗಳು, ಜಪಾನಿಗೆ ಜಲಸೈನ್ಯಕ್ಕಾಗಿ ಸರಿಸಮಾನತ್ವವನ್ನು ಕೊಡದಿರುವದಕ್ಕಾಗಿ, ಜಪಾನು ಸಮ್ಮೇಲನವನ್ನು ಧಿಕ್ಕರಿಸಿತು.

ತೋಯಾಮರವರು, ಜಪಾನಿನ ರಾಜಕೀಯ ಪ್ರಪಂಚದಲ್ಲಿ, ಅಗ್ರ ಗಣ್ಯತೆಯನ್ನು ಪಡೆದಿದ್ದರೂ, ಅವರೊಬ್ಬರು ಉದ್ದಾಮತರ ವೇದಾಂತಿಗಳು. ಬೌದ್ಧಧರ್ಮದ ಘನಪಂಡಿತರು. ಬೌದ್ಧಧರ್ಮದಿಂದಲೇ ಇವರು ಭಾರತ ವನ್ನು ಮನಃಪೂರ್ವಕವಾಗಿ ಪ್ರೀತಿಸುವರು. ರಬೀಂದ್ರನಾಥ ಕವಿಸಾರ್ವ ಭೌಮರು, ಜಪಾನಿಗೆ ಬಂದಾಗ ಜಪಾನಿನ ಧರ್ಮದ ವಿಷಯಗಳನ್ನು ತೋಯಾಮರವರ ಮುಖಾಂತರ ತಿಳಿದುಕೊಂಡು, ಜಪಾನವನ್ನು ಪ್ರೀತಿಸು ವಷ್ಟು ಸಮರ್ಥರೆಂದು ವ್ಯಾಪ್ತಿಯಿದೆ. ತೋಯಾಮರವರು ಸರಳಜೀವಿಗಳು. ಇವರ ನಿತ್ಯಜೀವನವನ್ನು ನೋಡಿದರೆ "ಜಪಾನಿನ ಗಾಂಧಿ"ಗಳೆಂದು ಯಾರು ಬೇಕಾದರೂ ಕರೆಯಲಿಕ್ಕೆ ಸಾಧ್ಯವಿದೆ. ಇವರ ಅನುಯಾಯಿಗಳಲ್ಲಿ ಅನೇಕರು, ಮಂತ್ರಿಪದವಿಗಳನ್ನು ಆಕ್ರಮಿಸಿದ್ದರು; ಅನೇಕರು ಕೋಟ್ಯಾ

ಧೀಶರಾಗಿದ್ದರೂ ತಮ್ಮ "ಗುರುಗಳ" ಸುಖಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ಕೊಡಲು ಸಿದ್ಧರಾಗಿದ್ದರೂ, ತೋಯಾಮುರವರು ಲೌಕಿಕ ಸುಖಗಳನ್ನು ನಿರಾಕರಿಸಿ, ಋಷಿಯಂತೆ ಒಂದು ಮುರುಕು ಮನೆಯಲ್ಲಿ ಸಂಸಾರವನ್ನು ಮಾಡಿಕೊಂಡಿರುವರು. ಇವರು ಮನೆಗೆ ಬಂದ ಅತಿಥಿಗಳನ್ನು ಆದರವಾಗಿ ಉಪಚರಿಸುವರು.

ತೋಯಾಮುರವರು ಸ್ಥಾಪಿಸಿದ "ಕರಿಸರ್ಪಗಳ ಸಂಘ"ವು ಇಂದು ಇಪ್ಪತ್ತು ಲಕ್ಷ ಸದಸ್ಯರುಗಳನ್ನು ಒಳಗೊಂಡಿರುವುದು. ಸಂಘದ ಧ್ಯೇಯವಾದರೂ, ದೇಶದ ಗೌರವವನ್ನು ಹೆಚ್ಚಿಸಿಕೊಂಡು ಹೋಗುವುದಾಗಿದೆ. ಯಾರಾದರೂ ದೇಶದ ಗೌರವಕ್ಕೆ ಕುಂದು ತಂದರೆ, ಅವರ ಕೊಲೆಯು ಶತಸಿದ್ಧ. ತೋಯಾಮುರವರ ನೇತೃತ್ವದಲ್ಲಿ, ಜಪಾನು ಬಿಳಿಜನಾಂಗದ ರಾಷ್ಟ್ರಗಳಿಂದ ಅನುಭವಿಸುತ್ತಿದ್ದ, ಅವಮಾನದ ಸ್ಥಿತಿಯನ್ನು ದೂರ ಮಾಡಿಕೊಂಡು, ಸರಿಸಮಾನತ್ವವನ್ನು ಪಡೆಯಿತು. ಬಿಳಿಯರು ಸೇರೆಂದರೆ, ಜಪಾನಿಯರು ಸವ್ವಾಸೇರು ಎನ್ನುವಷ್ಟು ಶಕ್ತಿಯನ್ನು ಗಳಿಸಿತು.

ಅನೇಕ ಬಾರಿ, ತೋಯಾಮುರವರು, ಭಾರತವು ಸ್ವಾತಂತ್ರ್ಯವನ್ನು ಪಡೆದು ಇಡೀ ಏಶಿಯಾಖಂಡಕ್ಕೇ ಮತ್ತೆ ಮಾರ್ಗದರ್ಶಕವಾಗುವಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

## ೮. ಮಾರ್ಕವೀಸ ಓಕುಮುರವರು (Marquis N. Okuma)

ಮಾರ್ಕವೀಸ ಓಕುಮುರವರು ಇಂಡೋ-ಜಪಾನ ಸಂಘದ ಅಧ್ಯಕ್ಷರಾಗಿರುವರು. ಇವರ ತಂದೆಯು ಮತ್ತು ಗತಿಸಿದವರ್ತಕ ಶಿರೋಮಣಿ ಟಾಟಾರವರ ಸ್ನೇಹಬಾಂಧವ್ಯದಿಂದಲೇ ಇಂಡಿಯಾ-ಜಪಾನಿನ ವ್ಯಾಪಾರವು ಲಕ್ಷಾಂತರ ರೂಪಾಯಿಗಳಿಂದ, ಕೋಟ್ಯಂತರ ರೂಪಾಯಿಗಳ ವರೆಗೆ ಮುಟ್ಟಿತು. ಅಂದಿನಿಂದ ಇಂದಿನ ವರೆಗೂ ಇಂಡಿಯಾ ದೇಶವು ಜಪಾನಿನ ವ್ಯಾಪಾರದಿಂದ ಕೋಟ್ಯಂತರ ರೂಪಾಯಿಗಳ ಲಾಭವನ್ನು ಪ್ರತಿವರ್ಷ ಪಡೆಯುತ್ತಿರುವುದು. ಮೇಲ್ಕಂಡ ಸಂಘವು ಪರದೇಶಗಳ ವ್ಯಾಪಾರದ ಸಂಬಂಧಕ್ಕಾಗಿ ಏರ್ಪಡಿಸಲ್ಪಟ್ಟಿದೆ. ಯಾವ ಭಾರತೀಯ ವರ್ತಕರೇ ಆಗಲಿ, ಈ ದೇಶದೊಡನೆ ವ್ಯಾಪಾರ ಮಾಡುವುದಕ್ಕೆ ಇಚ್ಛಿಸುವುದಾದರೆ,

ಈ ಸಂಘವು ತಕ್ಕ ಅನುಕೂಲಗಳನ್ನೊದಗಿಸಿಕೊಡುವುದು. ಇಂಡೋ-ಜಪಾನ ಸಂಘದ ಅಧಿಕಾರಿಗಳೆಲ್ಲ ಜಪಾನಿಯರೇ ಆಗಿದ್ದು, ಲಕ್ಷಾಂತರ ಆಸ್ತಿ-ಪಾಸ್ತಿಗಳನ್ನೊಳಗೊಂಡಿದೆ. ಇಂಡಿಯ ದೇಶದಿಂದ ಯಾರಾದರೂ ಈ ದೇಶವನ್ನು ಸಂಚರಿಸುವುದಕ್ಕೆ ಬಂದರೆ, ಮೇಲ್ಕಂಡ ಸಂಘವು ತಕ್ಕ ಅನುಕೂಲಗಳನ್ನು ಒದಗಿಸುವುದು. ಮಾರ್ಕವೀಸ್ ಓಕುಮುರವರು ಕೂಡ, ಭಾರತೀಯ ವಿದ್ಯಾರ್ಥಿಗಳಿಗೆ ಬಹಳ ಸಹಾಯಗಳನ್ನು ಮಾಡುತ್ತಿರುವರು.

## ಮಿ. ರಾ. ತೋಮೊ ವಾತನಾಬೆಯವರು (Mr. Tomo Watanabe)

ಇವರು, ಸನ್ ೧೯೨೩ರಿಂದ ೧೯೨೬ರ ವರೆಗೆ ಬೊಂಬಾಯಿಯಲ್ಲಿ ಜಪಾನಿನ ರಾಯಭಾರಿಗಳಾಗಿದ್ದರು. ಅಂದಿನಿಂದ ಭಾರತದ ಬಗ್ಗೆ, ಭಾರತೀಯರ ಬಗ್ಗೆ ಹೆಚ್ಚಿನ ಮಮತೆಯುಳ್ಳವರಾಗಿರುವರು. ಸದ್ಯಕ್ಕೆ ಇವರು, ಜಪಾನ ಸರಕಾರವು, ಪರದೇಶದ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ನಿರ್ಮಿಸಿರುವ, ಅಂತರರಾಷ್ಟ್ರೀಯ ವಿದ್ಯಾರ್ಥಿ ಗೃಹಕ್ಕೆ ಅಧ್ಯಕ್ಷರಾಗಿರುವರು. (The International Students House, 458, I-choma, Nishi-skubo Yodobashi-Kea, Tokeyo) ಇವರು ಭಾರತೀಯ ವಿದ್ಯಾರ್ಥಿಗಳು; ವಿವಿಧ ವಿಶ್ವವಿದ್ಯಾನಿಲಯಗಳಿಗೂ, ಕಾರಖಾನೆಗಳಿಗೂ ಸೇರುವುದಕ್ಕೆ ಹೆಚ್ಚಿನ ಸಹಾಯವನ್ನು ಮಾಡುತ್ತಿರುವರು.

## ಡಾ. ಟಿ. ಉಯದರವರು [Dr. Tetsunosake Ueda, Ph. D., D. Se (Econ)]

ಇವರು ವಾಣಿಜ್ಯ ವಿಶ್ವವಿದ್ಯಾನಿಲಯದ ಪ್ರೊಫೆಸರರಾಗಿರುವರು. ಲಾಲಾ ಲಜಪತರಾಯರು, ಎರಡಾವರ್ತಿ ಜಪಾನಿಗೆ ಬಂದಾಗ, ಇವರು ಅವರ ಕಾರ್ಯದರ್ಶಿಗಳಂತೆ ವರ್ತಿಸಿ, ಹೆಚ್ಚಿನ ಸಹಾಯವನ್ನು ಮಾಡಿದರು. ಡಾ. ಉಯದರವರು ಕೂಡ, ಭಾರತೀಯ ವಿದ್ಯಾರ್ಥಿಗಳಿಗೆ, ವಿಶ್ವವಿದ್ಯಾನಿಲಯಗಳನ್ನು ಸೇರುವುದಕ್ಕೆ ಹೆಚ್ಚು ಸಹಾಯವನ್ನು ಮಾಡುತ್ತಿರುವರು.

ಜಪಾನಿನಲ್ಲಿ ಭಾರತೀಯ ವಿದ್ಯಾರ್ಥಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕೆ ಭಾರತೀಯ ಯಾವ ಅಧಿಕಾರಿಯೂ ಇಲ್ಲದಿರುವುದ

ರಿಂದ, ಭಾರತೀಯ ವಿದ್ಯಾರ್ಥಿಗಳು ಮೇಲ್ಕಂಡ ಜಪಾನಿಯರ ದೊಡ್ಡ ಮನುಷ್ಯರುಗಳ ಸಹಾಯದಿಂದ ಮುಂದುವರಿಯಬೇಕಾಗಿದೆ.

## ಶ್ರೀ. ಎ. ಸಾಕಾಯಿ (Mr. A. Sakai)

ಇವರು ಇಂಡೋ-ಜಪಾನ್ ಸಂಘದ ನಿವೃತ್ತ ಕಾರ್ಯದರ್ಶಿಗಳು. ಇವರ ಇಪ್ಪತ್ತು ವರ್ಷಗಳ ಅಧಿಕಾರದ ಕಾಲದಲ್ಲಿ, ನೂರಾರು ಭಾರತೀಯ ವ್ಯಾಪಾರಸ್ಥರಿಗೂ, ದೇಶ ಸಂಚಾರಕರಿಗೂ, ವಿದ್ಯಾರ್ಥಿಗಳಿಗೂ ಮಹದುಪಕಾರವನ್ನು ಮಾಡಿರುವರು. ಇಂದಿಗೂ, ಸಾಕಾಯಿಯವರು, ಭಾರತದ ವಿದ್ಯಾರ್ಥಿಗಳಿಗೆ ಹೆಚ್ಚಿನ ಸಹಾಯವನ್ನು ಮಾಡುತ್ತಲಿರುವರು.

ಮೇಲ್ಕಂಡ ಮಹನೀಯರಂತೆ, ಇನ್ನೂ ಅನೇಕ ಜಪಾನಿಯರು, ಭಾರತ ವಿದ್ಯಾರ್ಥಿಗಳಿಗೆ ಸಹಾಯವನ್ನು ಮಾಡುತ್ತಿರುವರು ಪಾಶ್ಚಿಮಾತ್ಯ ದೇಶಿಯರು, ಭಾರತೀಯರನ್ನು ತುಚ್ಛವಾಗಿ ಕಾಣುವಂತೆ, ಇಲ್ಲಿಯ ಜನ ಸಮುದಾಯವು ಭಾರತೀಯರನ್ನು ಕಾಣುವುದಿಲ್ಲ. ಒಮ್ಮೆ ಭಾರತೀಯ ವಿದ್ಯಾರ್ಥಿಗಳು, ಇವರಿಗೆ ತಾವು 'ಭಾರತೀಯರು' ಎಂದು ತಿಳಿಸಿದರೆ ಸಾಕು, ಹೆಚ್ಚಿನ ಮರ್ಯಾದೆಯನ್ನು ಪಡೆಯುವರು. ಜಪಾನಿಯರೆಲ್ಲರು, ಬೌದ್ಧ ಧರ್ಮಿಯರಾಗಿರುವುದರಿಂದ,ಭಾರತದಿಂದ ಬರುವವರೆಲ್ಲರು ಬೌದ್ಧರೆಂತಲೂ ಮತ್ತು ಬುದ್ಧಿವಂತರೆಂತಲೂ ತಿಳಿದುಕೊಂಡಿರುವರು. ಭಾರತೀಯರು ಜಪಾನಿಯರ ನಡಾವಳಿಗಳನ್ನು ಜಾಗ್ರತೆಯಾಗಿ ಅನುಸರಿಸುವುದಕ್ಕೆ ಆಸ್ಪದ ವಿರುವುದು. ಯಾವ ಹೋಟೆಲು, ಫಲಹಾರ ಮಂದಿರ, ಎಂತಹ ಸಭೆಗಳಲ್ಲಿಯೇ ಆಗಲಿ, ಜಪಾನಿಯರು ಭಾರತೀಯರನ್ನು ಇತರ ಪಾಶ್ಚಿಮಾತ್ಯರ ಅಂತಸ್ತಿನಿಂದಲೇ ಕಾಣುವರು. ಸದ್ಯಕ್ಕೆ ಜನಸಮುದಾಯವು ಬಿಳಿಜನಾಂಗದವರನ್ನು ವಿರೋಧಿಸುತ್ತಿರುವುದರಿಂದ, ಅನೇಕ ಸಂದರ್ಭಗಳಲ್ಲಿ, ಬಿಳಿಯರಿಗಿಂತ ಭಾರತೀಯರಿಗೆ ಹೆಚ್ಚಿನ ಗೌರವಗಳು ದೊರಕುತ್ತಲಿವೆ.

ಪ್ರತಿಯೊಬ್ಬ ಜಪಾನಿಯನು ವರ್ತಮಾನಪತ್ರಿಕೆಗಳನ್ನು ಓದುತ್ತಿರುವುದರಿಂದ, ಇಂಡಿಯಾದಲ್ಲಿ ನಡೆಯುತ್ತಿರುವ ರಾಜಕೀಯ ಚಳವಳಿಯನ್ನು ಪ್ರತಿಯೊಬ್ಬನು ತಿಳಿದುಕೊಳ್ಳಲು ಆಸ್ಪದವಿರುವುದು. ಪ್ರತಿ ಜಪಾನಿಯನು ಯಾವ ಭಾರತೀಯನನ್ನು ಕಂಡರೂ "ಗಾಂಜಿಸಾರ್" (ಮ. ಗಾಂಧಿಜಿ

ಯವರು) ಯಾವ ರೀತಿಯಲ್ಲಿ ಇರುವರು? ಎಂದು ಪ್ರಶ್ನಿಸುವನು. ಅಲ್ಲದೆ ಪ್ರತಿಯೊಬ್ಬ ಜಪಾನಿಯೂ, ಭಾರತವು ಆದಷ್ಟು ಜಾಗ್ರತೆಯಾಗಿ ಸ್ವಾತಂತ್ರ್ಯವನ್ನು ಪಡೆಯಲೆಂದು ಆಶಿಸುವನು.

ಬಿಳಿ ಜನಾಂಗದವರ ತಪ್ಪುತಿಳುವಳಿಕೆಯ ಪ್ರಕಟನೆಯಿಂದ ಅನೇಕ ಜಪಾನಿಯರು, "ಭಾರತವು ಬಹು ಶಕೆಯ ದೇಶವೆಂತಲೂ, ಜನರು ಬರಿ 'ಅನ್ನ-ಸಾರು' (only ricc and curry) ಮಾತ್ರ ಊಟಮಾಡುವರೆಂತಲೂ, ತೊಟ್ಟಿಲಲ್ಲಿ ಮಲಗಿದ ಮಕ್ಕಳ ಮದವೆ ಮಾಡುವರೆಂ"ದೂ ಮುಂತಾಗಿ ತಿಳಿದಿರುವರು. ಆದರೆ ಸದ್ಯಕ್ಕೆ ಅನೇಕ ಜಪಾನಿಯರು, ಭಾರತೀಯರು ಸತ್ಯಾಂಶದ ಬಗ್ಗೆ ಪುಸ್ತಕಗಳನ್ನು ಬರೆದು, ಜನಸಾಮಾನ್ಯರಲ್ಲುಂಟಾಗಿರುವ ತಪ್ಪುತಿಳುವಳಿಕೆಯನ್ನು ನಾಶಮಾಡುತ್ತಲಿರುವರು.

— ಮುಗಿದುದು —

---

# ದಿ ಯುನಾಯಿಟೆಡ್ ಕರ್ನಾಟಕ
# ಇನ್ಸುರೆನ್ಸ್ ಕಂಪನಿ ಲಿಮಿಟೆಡ್

ಪ್ರಧಾನ ಕಾರ್ಯಾಲಯ : **ಧಾರವಾಡ**

ಕಂಪನಿಯು ಸುಮಾರು ೨೦೦ ಜನ ಯುವಕರಿಗೆ
ಉದ್ಯೋಗವನ್ನು ಕಲ್ಪಿಸಿದೆ.

**ಈಗಾಗಲೇ ಸರಕಾರದ ಆಧಾರಪತ್ರ ಮುಂತಾದವುಗಳಲ್ಲಿ
ತೊಡಗಿಸಿದ ಹಣ ೮೦,೦೦೦ ರೂಪಾಯಿಗಳಿಗೆ ಮಿಕ್ಕಿದೆ.**

೧೯೩೮ರ ಕೊನೆಗೆ ೧೪,೦೦೦೦೦ ರೂಪಾಯಿಗಳಿಗೆ
ಮಿಕ್ಕಿದ ವಿಮಾಕಾರ್ಯವಾಗಿದೆ.

**ಕನ್ನಡಿಗರ ಅಭಿಮಾನದ ಸಂಸ್ಥೆ !**

**ಭರದಿಂದ ಬೆಳೆಯುತ್ತಿರುವ ವಿಮಾಕಂಪನಿ !**

ಲಾಭದಾಯಕ ಕಮೀಶನ್ ಕರಾರುಗಳು. ವ್ಯವಹಾರಕುಶಲರೂ, ಉದ್ಯಮಿಗಳೂ ಆದ ಏಜಂಟರು ಬೇಕು.

ವಿಶೇಷ ವಿವರಕ್ಕೆ ಬರೆಯುವುದು.

ಎಂ. ಗೋವರ್ಧನರಾವ್,
ಮ್ಯಾನೇಜರ್,
ಯು. ಇ. ಕಂ. ಲಿ. ಧಾರವಾಡ.